# ಕಠೋಪನಿಷತ್

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು

# ಪ್ರಸ್ತಾವನೆ

ಉಪನಿಷತ್ತುಗಳಲ್ಲಿ ಕಠೋಪನಿಷತ್ತು ಅತ್ಯಂತ ಪ್ರಸಿದ್ಧವೂ ಆದರಣೀಯವೂ ಆಗಿದೆ. ಪಾಶ್ಚಿಮಾತ್ಯಪಂಡಿತರು ಭಾರತೀಯ ಅಧ್ಯಾತ್ಮ ರಹಸ್ಯವನ್ನು ವಿವರಿಸುವಾಗ ಇದನ್ನು ಪರಮಾದರ್ಶವಾಗಿ ಉಲ್ಲೇಖಿಸಿರುತ್ತಾರೆ.[೧] ಇದಕ್ಕೆ 'ಕಾಠಕೋಪನಿಷತ್' ಎಂಬ ಹೆಸರೂ ಉಂಟು. ಇದು ಕೃಷ್ಣಯಜುರ್ವೇದದ ಕಾಠಕಶಾಖೆಗೆ ಸೇರಿದೆ. ಇದು ಸಾಮವೇದಕ್ಕೆ ಸೇರಿದುದೆಂದು ಕೋಲ್‌ಬ್ರೂಕ್ ಮಹಾಶಯರ ಮತ;[೨] ಇದೊಂದು ಆಥರ್ವಣ ಉಪನಿಷತ್ತೆಂದು ಕೆಲವರ ಮತ. ಆದರೆ ಕಾಠಕಬ್ರಾಹ್ಮಣವಾಗಲಿ ಈ ಉಪನಿಷತ್ತನ್ನು ಒಳಗೊಂಡಿರುವ ಸಾಮವೇದದ ಅಥವಾ ಅಥರ್ವವೇದದ ಭಾಗಗಳಾಗಲಿ ನಮಗೆ ಸಿಕ್ಕಿಲ್ಲವಾದುದರಿಂದ ಈ ವಿಚಾರದಲ್ಲಿ ಸಂಶೋಧನೆ ನಡೆಯಬೇಕಾಗಿದೆ. ನಚಿಕೇತನ ಕಥೆಯು ತೈತ್ತಿರೀಯ ಬ್ರಾಹ್ಮಣದಲ್ಲಿ (೩, ೧, ೮) ಬರುವುದರಿಂದಲೂ, ಮುಕ್ತಿಕೋಪನಿಷತ್ತಿನಲ್ಲಿ ಕೊಟ್ಟಿರುವ ಕೃಷ್ಣಯಜುರ್ವೇದೀಯ ಉಪನಿಷತ್ತುಗಳ ಪಟ್ಟಿಯಲ್ಲಿ ಈ ಉಪನಿಷತ್ತಿನ ಹೆಸರು ಪ್ರಥಮಸ್ಥಾನವನ್ನು ಹೊಂದಿರುವುದರಿಂದಲೂ, ಇದಕ್ಕೂ ಕೃಷ್ಣಯಜುರ್ವೇದಕ್ಕೂ ಸಂಬಂಧವಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

ನಚಿಕೇತನು ಯಮಲೋಕಕ್ಕೆ ಹೋಗಿ ಯಮನಿಂದ ಆತ್ಮಜ್ಞಾನವನ್ನು ಹೊಂದಿದ ಆಖ್ಯಾಯಿಕೆಯು ಅತ್ಯಂತ ಪುರಾತನವಾದದ್ದು. ಇದರ

---

೧ 'It formed part of the Persian translation, was rendered into English by Rammohan Roy, and has since been frequently quoted by English, French and German writers as one of the most perfect specimens of the mystic philosophy and poetry of the ancient Hindus.' Max Muller: *Sacred Books of the East*, vol. I p. XXI

೨ *Miscellaneous Essays*, I, 96, note.

ಕುರುಹನ್ನು ಋಗ್ವೇದದ ಹತ್ತನೆಯ ಮಂಡಲದ ೧೩೫ನೆಯ ಸೂಕ್ತದಲ್ಲಿ ಕಂಡುಹಿಡಿಯಬಹುದು. ಈ ಸೂಕ್ತಕ್ಕೆ ಯಮನೇ ದೇವತೆ. ಕುಮಾರನೇ ಋಷಿ. ಇದರಲ್ಲಿ ಉಲ್ಲೇಖಿತನಾಗಿರುವ ಕುಮಾರನೇ ನಚಿಕೇತನೆಂದು ಸಾಯಣಾಚಾರ್ಯರು ಹೇಳಿರುತ್ತಾರೆ. ಈ ಕಥೆಯು ತೈತ್ತಿರೀಯಬ್ರಾಹ್ಮಣ ದಲ್ಲಿ ಇನ್ನೂ ವಿಸ್ತಾರವಾಗಿ ಬೆಳೆದಿದೆ.

ಈ ಉಪನಿಷತ್ತಿನಲ್ಲಿ ಮೂರು ಮೂರು ವಲ್ಲಿಗಳನ್ನೊಳಗೊಂಡ ಎರಡು ಅಧ್ಯಾಯಗಳಿವೆ.

## ಮೊದಲನೆಯ ಅಧ್ಯಾಯ

**ಮೊದಲನೆಯ ವಲ್ಲೀ:** ನಚಿಕೇತನು ತಂದೆಯ ಆಜ್ಞೆಯ ಪ್ರಕಾರ ಯಮನ ಸಮೀಪಕ್ಕೆ ಹೋದನು. ಯಮನು ಎಲ್ಲಿಯೋ ಹೋಗಿದ್ದುದ ರಿಂದ ನಚಿಕೇತನು ಯಮನು ಹಿಂತಿರುಗುವ ವರೆಗೆ ಉಪವಾಸಮಾಡುತ್ತ ಮೂರು ದಿನಗಳನ್ನು ಕಳೆದನು. ನಮಸ್ಕಾರಾರ್ಹನಾದ ಅತಿಥಿಯು ತನ್ನ ಮನೆಯಲ್ಲಿ ಮೂರು ದಿನಗಳು ಊಟಮಾಡದೆ ಇದ್ದುದರಿಂದ ಆ ದೋಷ ಪರಿಹಾರಕ್ಕಾಗಿ ಯಮನು ನಚಿಕೇತನಿಗೆ ಮೂರು ವರಗಳನ್ನು ಅನುಗ್ರಹಿ ಸಿದನು. ತನ್ನ ತಂದೆಯು ತನ್ನ ವಿಷಯದಲ್ಲಿ ಪ್ರಸನ್ನನಾಗಿರಬೇಕೆಂದು ಮೊದಲನೆಯ ವರವನ್ನು ನಚಿಕೇತನು ಕೇಳಿದನು. ಎರಡನೆಯ ವರವು ಸ್ವರ್ಗಕ್ಕೆ ಸಾಧನವಾದ ಅಗ್ನಿವಿದ್ಯೆ. ಮೂರನೆಯ ವರವು ಆತ್ಮತತ್ತ್ವಕ್ಕೆ ಸಂಬಂಧಪಟ್ಟದ್ದು. ದೇಹಾವಸಾನವಾದ ಮೇಲೆ ಆತ್ಮನು ಇದ್ದಾನೆಯೆ ಅಥವಾ ಇಲ್ಲವೆ ಎಂಬುದು ಪ್ರಶ್ನೆ ಅಥವಾ ರಂಗರಾಮಾನುಜರು ಹೇಳುವ ಹಾಗೆ ಮೋಕ್ಷಕ್ಕೆ ಅಧಿಕಾರಿಯಾದ ಮನುಷ್ಯನು ಸತ್ತು ಸರ್ವಬಂಧನ ಗಳಿಂದ ಮುಕ್ತನಾದ ಮೇಲೆ ಇದ್ದಾನೆಯೊ ಇಲ್ಲವೊ ಎಂಬುದು ಪ್ರಶ್ನೆ. ನಚಿಕೇತನು ಆತ್ಮತತ್ತ್ವವನ್ನು ತಿಳಿದುಕೊಳ್ಳಲು ತಕ್ಕವನೊ ಅಲ್ಲವೊ ಎಂಬುದನ್ನು ಪರೀಕ್ಷಿಸುವುದಕ್ಕಾಗಿ ಯಮನು ಇವನನ್ನು ನಾನಾವಿಧ ವಾದ ಭೋಗದ ಆಶೆಗಳಿಂದ ಪ್ರಲೋಭನಗೊಳಿಸಿದನು. ಆದರೆ ನಚಿ

ಕೇತನು ಇಂದ್ರಿಯಗಳನ್ನು ಕ್ಷೀಣಗೊಳಿಸುವ ಯಾವ ಸುಖವನ್ನೂ ಬಯಸಲಿಲ್ಲ.

**ಎರಡನೆಯ ವಲ್ಲೀ:** ನಚಿಕೇತನು ಬ್ರಹ್ಮವಿದ್ಯೆಗೆ ಅಧಿಕಾರಿ ಎಂದು ಅರಿತು ಅವನಿಗೆ ಉಪದೇಶಮಾಡಿದನು: ಶ್ರೇಯಸ್ಸು ಬೇರೆ, ಪ್ರೇಯಸ್ಸು ಬೇರೆ. ಅವಿವೇಕಿಯು ಯೋಗಕ್ಷೇಮವನ್ನೇ ಬಯಸುತ್ತ ಪ್ರೇಯಸ್ಸನ್ನು ಆರಿಸಿಕೊಂಡು ಪುರುಷಾರ್ಥದಿಂದ ಚ್ಯುತನಾಗುತ್ತಾನೆ. ಧೀಮಂತನು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಆತ್ಮತತ್ತ್ವವನ್ನು ಶ್ರವಣಮಾಡಿದರೂ ತಿಳಿದುಕೊಳ್ಳುವುದು ಕಷ್ಟ. ಇದನ್ನು ಉಪದೇಶಮಾಡುವ ಗುರುವೂ ತಿಳಿದುಕೊಳ್ಳುವ ಶಿಷ್ಯನೂ ಅದ್ಭುತರಾದ ವ್ಯಕ್ತಿಗಳು. ಸೂಕ್ಷ್ಮವಾಗಿರುವ ಆತ್ಮತತ್ತ್ವವನ್ನು ಸಾಮಾನ್ಯ ಜನರಿಂದ ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ, ಉತ್ತಮನಾದ ಆಚಾರ್ಯನಿಂದಲೇ ತಿಳಿದುಕೊಳ್ಳಬೇಕು. ಈ ವಲ್ಲಿಯ ಹತ್ತನೆಯ ಮಂತ್ರವು ಅರ್ಥಗರ್ಭಿತವಾಗಿದೆ. ಅನಿತ್ಯವಾದ ದ್ರವ್ಯಗಳಿಂದ ನಿತ್ಯವನ್ನು ಪಡೆದಿರುವೆನೆಂದು ಯಮನು ಹೇಳುತ್ತಾನೆ. ಇದು ಆಪೇಕ್ಷಿಕವಾದ ನಿತ್ಯವೆಂದು ಶಂಕರಾಚಾರ್ಯರು ಹೇಳಿರುತ್ತಾರೆ. ಮೊದಲಿನಿಂದಲೂ ಸ್ವರ್ಗಪದಕ್ಕೆ ಪರಮಪದವೆಂಬ ಅರ್ಥವನ್ನು ಹೇಳಿರುವ ರಂಗರಾಮಾನುಜರು ನಿತ್ಯಪದಕ್ಕೆ 'ನಿತ್ಯಫಲಕ್ಕೆ ಸಾಧನವಾದ ಜ್ಞಾನ' ಎಂದು ಅರ್ಥವನ್ನು ಹೇಳಿರುತ್ತಾರೆ. ಅನಂತರ ಬ್ರಹ್ಮದ ವಾಚಕವೂ ಪ್ರತೀಕವೂ ಆದ ಪ್ರಣವದ ಮೂಲಕ ಬ್ರಹ್ಮದ ಸ್ವರೂಪವನ್ನು ಯಮನು ಉಪದೇಶಮಾಡುತ್ತಾನೆ. ಈ ವಲ್ಲಿಯಲ್ಲಿ ಇಪ್ಪತ್ತನೆಯ ಮತ್ತು ಇಪ್ಪತ್ತಮೂರನೆಯ ಮಂತ್ರಗಳು ಮುಖ್ಯವಾದುವುಗಳೆಂದು ಅನೇಕರ ಮತ. "ಧಾತುಪ್ರಸಾದಾತ್' ಎಂಬಲ್ಲಿ (೨೦ನೇ ಮಂತ್ರ) 'ಧಾತು' ಎಂಬ ಶಬ್ದಕ್ಕೆ ಶಂಕರಾಚಾರ್ಯರು 'ಮನಸ್ಸೇ ಮೊದಲಾದ ಇಂದ್ರಿಯಗಳು' ಎಂದು ಅರ್ಥವನ್ನು ಹೇಳಿರುತ್ತಾರೆ. ಧಾತುಗಳು ಪ್ರಸನ್ನವಾದರೆ ಆತ್ಮತತ್ತ್ವವು ಮನಸ್ಸಿನಲ್ಲಿ ಹೊಳೆಯುತ್ತದೆ ಎಂದು ಭಾವ. 'ಧಾತುಪ್ರಸಾದಾತ್' ಎಂಬುದಕ್ಕೆ 'ಧಾತೋಃ ಧಾರಕಸ್ಯ ಪರಮಾತ್ಮನಃ ಪ್ರಸಾದಾತ್' ಎಂದರೆ

'ಧಾರಕನಾದ ಪರಮಾತ್ಮನ ಅನುಗ್ರಹದಿಂದ' ಎಂದು ರಂಗರಾಮಾನುಜರು ಹೇಳಿರುತ್ತಾರೆ. ನಿಷ್ಕಾಮರಾಗಿ ಆತ್ಮನನ್ನೇ ಬಯಸುವವರಿಗೆ ಆತ್ಮನಿಂದಲೇ ಆತ್ಮನು ಲಭಿಸುತ್ತಾನೆ; ಎಂದರೆ ಈ ಆತ್ಮನು ಸ್ವ-ಯಾಥಾತ್ಮ್ಯವನ್ನು (ತನೂಂ ಸ್ವಾಂ) ಆತ್ಮಕಾಮನಿಗೆ ತೋರಿಸುತ್ತಾನೆ ಎಂದು ಶಂಕರಾಚಾರ್ಯರು ಇಪ್ಪತ್ತಮೂರನೆಯ ಮಂತ್ರವನ್ನು ವಿವರಿಸಿರುತ್ತಾರೆ. ಯಾವನು ಪರಮಾತ್ಮನ ಪ್ರಿಯತಮನೊ ಅವನನ್ನೇ ಪರಮಾತ್ಮನು ಆರಿಸುತ್ತಾನೆ; ಯಾವನು ಭಗವಂತನಲ್ಲಿ ಪ್ರೀತಿಯುಳ್ಳವನಾಗಿರುವನೊ ಅವನೇ ಭಗವಂತನಿಗೆ ಪ್ರಿಯತಮನಾಗುತ್ತಾನೆ. ಆದುದರಿಂದ ಉಪಾಸಕನಿಗೆ ಭಗವಂತನಲ್ಲಿರುವ ಪ್ರೀತಿಯು ಭಗವಂತನಿಗೆ ಅವನಲ್ಲಿ ಪ್ರೀತಿಯನ್ನುಂಟು ಮಾಡಿ ಪರಮಾತ್ಮಪ್ರಾಪ್ತಿಗೆ ಕಾರಣವಾಗುತ್ತದೆಂದು ರಂಗರಾಮಾನುಜರು ವಿವರಣೆ ಮಾಡಿರುತ್ತಾರೆ. ಸದಾಚಾರ ಮತ್ತು ಇಂದ್ರಿಯನಿಗ್ರಹ ಇವು ಆತ್ಮಪ್ರಾಪ್ತಿಗೆ ಅತ್ಯಂತ ಆವಶ್ಯಕವೆಂಬ ಉಪದೇಶದೊಂದಿಗೆ ಈ ವಲ್ಲಿಯು ಸಮಾಪ್ತವಾಗುತ್ತದೆ.

**ಮೂರನೆಯ ವಲ್ಲೀ :** ಈ ವಲ್ಲಿಯ ಮುಖ್ಯ ವಿಷಯ ರಥರೂಪಕ ಕಲ್ಪನೆ. ಶರೀರವು ರಥ, ಆತ್ಮನೇ ರಥದ ಒಡೆಯ ಎಂದರೆ ರಥಿ, ಬುದ್ಧಿಯು ಸಾರಥಿ, ಮನಸ್ಸು ಕಡಿವಾಣ, ಇಂದ್ರಿಯಗಳು ಕುದುರೆಗಳು, ಶಬ್ದಾದಿ ವಿಷಯಗಳು ಆ ಕುದುರೆಗಳು ಹೋಗುವ ರಸ್ತೆಗಳು. ಯಾವನು ಅವಿವೇಕಿಯೊ ಅವನ ಇಂದ್ರಿಯಗಳು ತುಂಟ ಕುದುರೆಗಳಂತೆ ವಶವಾಗದೆ ಇರುವುವು. ಅವನು ಸಂಸಾರವನ್ನೇ ಹೊಂದುತ್ತಾನೆ. ಯಾವನು ವಿವೇಕಿಯೊ ಅವನ ಇಂದ್ರಿಯಗಳು ಒಳ್ಳೆಯ ಕುದುರೆಗಳಂತೆ ವಶವಾಗಿ ಇರುವುವು. ಅವನು ಪರಮಪದವನ್ನು ಮುಟ್ಟುತ್ತಾನೆ. ಬ್ರಾಹ್ಮಣಸದಸ್ಸಿನಲ್ಲಾಗಲಿ ಶ್ರಾದ್ಧಕಾಲದಲ್ಲಾಗಲಿ ಈ ಉಪನಿಷತ್ತಿನ ಶ್ರವಣಮಾಡಿಸಿದರೆ ಅನಂತಫಲ ಉಂಟಾಗುವುದೆಂಬ ಉಪದೇಶದೊಂದಿಗೆ ಈ ವಲ್ಲಿಯು ಸಮಾಪ್ತವಾಗುತ್ತದೆ.

## ಎರಡನೆಯ ಅಧ್ಯಾಯ

**ನಾಲ್ಕನೆಯ ವಲ್ಲೀ:** ಇಂದ್ರಿಯಗಳು ಸ್ವಭಾವತಃ ಹೊರಗೇ ಹೋಗುತ್ತವೆ. ಆದುದರಿಂದ ಮನುಷ್ಯನು ಹೊರಗೆ ನೋಡುತ್ತಾನೆಯೇ ವಿನಾ ಅಂತರಾತ್ಮನನ್ನು ನೋಡುವುದಿಲ್ಲ. ಅಮೃತತ್ವವನ್ನು ಬಯಸುವ ಯಾವನೊ ಒಬ್ಬ ಧೀರನು ಇಂದ್ರಿಯಗಳನ್ನು ಹಿಂತಿರುಗಿಸಿ ಪ್ರತ್ಯಗಾತ್ಮನನ್ನು ನೋಡುತ್ತಾನೆ. ಪರಮಾತ್ಮನು ಅಂಗುಷ್ಠಮಾತ್ರಪರಿಮಾಣವುಳ್ಳವನು. ಇವನೇ ಭೂತಭವಿಷ್ಯಗಳ ಒಡೆಯನು. ಇಂದೂ ಆತನೇ, ನಾಳೆಯೂ ಆತನೇ. ಇವನಲ್ಲಿ ಭೇದವನ್ನು ಕಾಣಕೂಡದು. ಶುದ್ಧವಾದ ನೀರಿನಲ್ಲಿ ಶುದ್ಧವಾದ ನೀರನ್ನು ಚೆಲ್ಲಿದರೆ ಹೇಗೆ ಆಗುವುದೊ ಹಾಗೆಯೇ ಜ್ಞಾನಿಯಾದ ಮುನಿಯ ಆತ್ಮನೂ ಆಗುವನು.

**ಐದನೆಯ ವಲ್ಲೀ:** ಈ ವಲ್ಲಿಯಲ್ಲಿ ಬ್ರಹ್ಮನ ಅಂತರ್ಯಾಮಿತ್ವವನ್ನು ಸ್ವಲ್ಪ ವಿಸ್ತಾರವಾಗಿ ಉಪದೇಶಿಸಿದೆ. ಈ ಶರೀರವೆಂಬ ಪುರದಲ್ಲಿರುವ ಆತ್ಮನನ್ನು ಸರಿಯಾಗಿ ತಿಳಿದುಕೊಂಡರೆ ಶೋಕವನ್ನು ದಾಟಿ ಮುಕ್ತನಾಗಬಹುದು. ಅವನು ಸರ್ವವ್ಯಾಪಕನೂ ಹೌದು, ಒಂದು ಪುರದಲ್ಲಿ ಮಾತ್ರ ಇಲ್ಲ. ಇಂದ್ರಿಯಪ್ರಾಣಗಳ ಕಾರ್ಯಗಳು ಈ ಆತ್ಮನಿಗಾಗಿ ನಡೆಯುತ್ತಿರುವುವು. ಇವನನ್ನು ಮೀರಲು ಯಾರಿಗೂ ಆಗುವುದಿಲ್ಲ. ಮರಣವನ್ನು ಹೊಂದಿದ ಮೇಲೆ ಕೆಲವರು ಕರ್ಮಕ್ಕೆ ಮತ್ತು ಜ್ಞಾನಕ್ಕೆ ಅನುಸಾರವಾಗಿ ಶರೀರವನ್ನು ಹೊಂದಲು ಯೋನಿಯನ್ನೂ ಮತ್ತೆ ಕೆಲವರು ಸ್ಥಾಣುವನ್ನೂ ಹೊಂದುತ್ತಾರೆ.

**ಆರನೆಯ ವಲ್ಲೀ:** ಸಂಸಾರಸ್ವರೂಪವನ್ನು ನಿಶ್ಚಯಿಸುವುದರ ಮೂಲಕ ಬ್ರಹ್ಮಸ್ವರೂಪವನ್ನು ನಿರ್ಧರಿಸಲು ಆರನೆಯ ವಲ್ಲಿಯು ಆರಂಭವಾಗಿದೆ. ಸಂಸಾರವೃಕ್ಷದ ಮೂಲ ಬ್ರಹ್ಮವು. ಬ್ರಹ್ಮದ ನಿಯಾಮಕಶಕ್ತಿಯಿಂದ ಸೂರ್ಯಚಂದ್ರಾಗ್ನಿವಾಯುಗಳು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರುವುವು. ಬ್ರಹ್ಮರೂಪವನ್ನು ಕಣ್ಣಿನಿಂದ ನೋಡಲು ಆಗುವುದಿಲ್ಲ. ಮನಸ್ಸನ್ನು ನಿಯಮಿಸುವ ಬುದ್ಧಿಯಿಂದ, ಮನನರೂಪವಾದ ಸಮ್ಯಗ್ದರ್ಶನದಿಂದ ಬ್ರಹ್ಮವು ಪ್ರಕಾಶಿತವಾಗುವುದು; ಅಥವಾ ರಂಗ

ರಾಮಾನುಜರು ಹೇಳುವಂತೆ ಮನಸ್ಸಿನ ಮೂಲಕ ಭಕ್ತಿಯಿಂದಲೂ ಧೃತಿ ಯಿಂದಲೂ ಬ್ರಹ್ಮರೂಪವನ್ನು ತಿಳಿದುಕೊಳ್ಳಬಹುದು. ಇಂದ್ರಿಯಗಳು ಮನಸ್ಸಿನೊಂದಿಗೆ ಶಾಂತವಾಗಿ ಬುದ್ಧಿಯು ಅಲ್ಲಾಡದಿದ್ದರೆ ಅದನ್ನು ಪರಮ ಗತಿಯೆಂದು ಹೇಳುತ್ತಾರೆ. ಸ್ಥಿರವಾದ ಇಂದ್ರಿಯಧಾರಣೆ ಎಂಬ ಅವ ಸ್ಥೆಯೇ ಯೋಗವು. ಬ್ರಹ್ಮವು ಅತೀಂದ್ರಿಯವಾದರೂ ಆಗಮಾರ್ಥಾನು ಸಾರಿಯಾದ ಶ್ರದ್ಧೆಯುಳ್ಳ ಗುರುವಿನಿಂದ ತಿಳಿಯಬಹುದು. ಹೃದಯವನ್ನು ಆಶ್ರಯಿಸಿಕೊಂಡಿರುವ ಕಾಮಗಳು ನಾಶವಾದರೆ ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳಬಹುದು. ಹೃದಯಕ್ಕೆ ನೂರೊಂದು ನಾಡಿಗಳಿವೆ. ಅವು ಗಳಲ್ಲಿ ಒಂದು ನೆತ್ತಿಯ ವರೆಗೆ ಹೊರಟಿದೆ. ಅದರ ಮೂಲಕ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ. ಇತರ ನಾಡಿಗಳು ಸಂಸಾರಕ್ಕೆ ಕಾರಣವಾಗಿರುತ್ತವೆ. ಹದಿನೇಳನೆಯ ಮಂತ್ರದಲ್ಲಿ ಎಲ್ಲ ವಲ್ಲಿಗಳ ಅರ್ಥವನ್ನು ಉಪಸಂಹಾರಮಾಡಿದೆ. ಜನರ ಹೃದಯದಲ್ಲಿ ಇರುವ ಅಂಗುಷ್ಠಮಾತ್ರಪರಿಮಾಣವುಳ್ಳ ಪುರುಷನನ್ನು ತನ್ನ ಶರೀರದಿಂದ ಬೇರ್ಪಡಿಸಿ ಅವನು ಶುದ್ಧನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು. ಯಮನು ಉಪದೇಶಿಸಿದ ಬ್ರಹ್ಮವಿದ್ಯೆಯನ್ನೂ ಯೋಗವಿಧಿಯನ್ನೂ ತಿಳಿದು ಕೊಂಡು ನಚಿಕೇತನು ಬ್ರಹ್ಮವನ್ನು ಪಡೆದುಕೊಂಡನು. ಇದರಂತೆ ಯಾವನು ಅಧ್ಯಾತ್ಮವನ್ನು ಹೀಗೆ ತಿಳಿದುಕೊಳ್ಳುತ್ತಾನೆಯೊ ಅವನೂ ಮುಕ್ತನಾಗುವನು. ಇದೇ ಕಠೋಪನಿಷತ್ತಿನ ಸಂದೇಶ.

ಈ ಪುಸ್ತಕದ ಮೊದಲನೆಯ ಭಾಗದಲ್ಲಿ ಮೂಲದೊಂದಿಗೆ ಶಾಂಕರ ಭಾಷ್ಯಾನುಸಾರವಾಗಿ ಪ್ರತಿಪದಾರ್ಥ-ತಾತ್ಪರ್ಯ-ಟಿಪ್ಪಣಿಗಳನ್ನು ಕೊಟ್ಟು ಎರಡನೆಯ ಭಾಗದಲ್ಲಿ ರಂಗರಾಮಾನುಜಯತಿಗಳ ವ್ಯಾಖ್ಯಾನುಸಾರ ವಾಗಿ ತಾತ್ಪರ್ಯ-ಟಿಪ್ಪಣಿಗಳನ್ನು ಕೊಟ್ಟಿದೆ. ದ್ವೈತಸಂಪ್ರದಾಯರೀತ್ಯಾ ಈ ಉಪನಿಷತ್ತಿನ ತಾತ್ಪರ್ಯವನ್ನು ಸೇರಿಸಲು ಸಾಧ್ಯವಾಗದುದಕ್ಕಾಗಿ ವಿಷಾದಿಸುತ್ತೇವೆ.

ಶ್ರೀರಾಮಕೃಷ್ಣಾಶ್ರಮ
ಮಂಗಳೂರು

**ಸ್ವಾಮಿ ಆದಿದೇವಾನಂದ**

# ಶಾಂತಿಪಾಠ

## ಹರಿಃ ಓಮ್

**ಸಹ ನಾವವತು ಸಹ ನೌ ಭುನಕ್ತು ಸಹ ವೀರ್ಯಂ ಕರವಾವಹೈ ।**
**ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ**

**ನೌ**=ನಮ್ಮಿಬ್ಬರನ್ನೂ **ಸಹ**=ಜೊತೆಯಲ್ಲಿ **ಅವತು**=ಕಾಪಾಡಲಿ; **ನೌ**=ನಮ್ಮಿಬ್ಬರನ್ನೂ **ಸಹ**=ಜೊತೆಯಲ್ಲಿ **ಭುನಕ್ತು**=ಪೋಷಿಸಲಿ; **ಸಹ**=ಜೊತೆಯಲ್ಲಿ **ವೀರ್ಯಂ**=ಸಾಮರ್ಥ್ಯವನ್ನು **ಕರವಾವಹೈ**=ಉಂಟುಮಾಡುವಂತಾಗಲಿ; **ನೌ**=ನಮ್ಮಿಬ್ಬರ **ಅಧೀತಂ**=ಅಧ್ಯಯನವು **ತೇಜಸ್ವಿ ಅಸ್ತು**=ತೇಜಸ್ವಿಯಾಗಲಿ; **ಮಾ ವಿದ್ವಿಷಾವಹೈ**=ದ್ವೇಷಮಾಡದೆ ಇರುವಂತಾಗಲಿ.

ಹರಿಃ ಓಮ್

(ಪರಮೇಶ್ವರನು) ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ; ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ; (ನಾವು) ಜೊತೆಯಲ್ಲಿ ಸಾಮರ್ಥ್ಯವನ್ನು ಉಂಟುಮಾಡುವಂತಾಗಲಿ; ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ; (ನಾವು ಪರಸ್ಪರ) ದ್ವೇಷಮಾಡದೆ ಇರುವಂತಾಗಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

# ಕಠೋಪನಿಷತ್

## ಮೊದಲನೆಯ ಅಧ್ಯಾಯ

### ಮೊದಲನೆಯ ವಲ್ಲೀ

**ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ ।**
**ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥ ೧ ॥**

**ವಾಜಶ್ರವಸಃ** = ವಾಜಶ್ರವಸನು **ಉಶನ್ ಹ ವೈ** = ಇಚ್ಛಿಸುವವನಾಗಿ **ಸರ್ವ-ವೇದಸಂ** = ಸರ್ವಸ್ವವನ್ನೂ **ದದೌ** = ಕೊಟ್ಟನು. **ತಸ್ಯ ಹ** = ಅವನಿಗೆ **ನಚಿಕೇತಾಃ ನಾಮ** = ನಚಿಕೇತನೆಂಬ **ಪುತ್ರಃ** = ಮಗನು **ಆಸ** = ಇದ್ದನು.

೧. ವಾಜಶ್ರವಸನು[೧] (ಯಜ್ಞಫಲವನ್ನು) ಇಚ್ಛಿಸುವವನಾಗಿ[೨] ಸರ್ವಸ್ವವನ್ನೂ ಕೊಟ್ಟನು.[೩] ಅವನಿಗೆ ನಚಿಕೇತನೆಂಬ ಮಗನಿದ್ದನು.

[[೧] ಅನ್ನದಾನಾದಿಗಳಿಂದ ಯಶಸ್ಸನ್ನು ಪಡೆದವನಿಗೆ ವಾಜಶ್ರವಸ್ಸು ಎಂದು ಹೆಸರು; ಅಥವಾ ರೂಢಿಯಿಂದಲೇ ಆ ಹೆಸರು ಬಂದಿರಬಹುದು. ವಾಜಶ್ರವಸ್ಸಿನ ಮಗ ವಾಜಶ್ರವಸ. ೯ನೆಯ ಮಂತ್ರದಲ್ಲಿ ಗೌತಮನೆಂದೂ ೧೧ನೆಯ ಮಂತ್ರದಲ್ಲಿ ಔದ್ದಾಲಕಿ ಆರುಣಿಯೆಂದೂ ಇವನನ್ನು ಕರೆದಿದೆ.

[೨] ಇವನು ವಿಶ್ವಜಿತ್ ಎಂಬ ಯಾಗವನ್ನು ಮಾಡಿದನು. ಇದರಲ್ಲಿ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕು.

[೩] ದಾನಮಾಡಿದನು.]

**ತಂ ಹ ಕುಮಾರಂ ಸಂತಂ ದಕ್ಷಿಣಾಸು ನೀಯಮಾನಾಸು**
**ಶ್ರದ್ಧಾऽऽವಿವೇಶ; ಸೋಽಮನ್ಯತ ॥ ೨ ॥**

**ದಕ್ಷಿಣಾಸು ನೀಯಮಾನಾಸು** = ದಕ್ಷಿಣೆಗಳನ್ನು ತೆಗೆದುಕೊಂಡು ಬರುತ್ತಿರುವಾಗ **ಕುಮಾರಂ ಸಂತಂ ತಂ ಹ** = ಕುಮಾರನಾಗಿರುವ ಅವನನ್ನು **ಶ್ರದ್ಧಾ** = ಶ್ರದ್ಧೆಯು **ಆವಿವೇಶ** = ಪ್ರವೇಶಿಸಿತು. **ಸಃ** = ಅವನು **ಅಮನ್ಯತ** = ಯೋಚಿಸಿದನು:

೨. (ಋತ್ವಿಕ್ಕುಗಳಿಗೂ ಸದಸ್ಯರಿಗೂ ಕೊಡಲು) ದಕ್ಷಿಣೆಗಳನ್ನು ತೆಗೆದುಕೊಂಡು ಬರುತ್ತಿರುವಾಗ ಕುಮಾರನಾಗಿರುವ ಅವನನ್ನು[೧] ಶ್ರದ್ಧೆಯು[೨] ಪ್ರವೇಶಿಸಿತು.[೩] ಅವನು (ಹೀಗೆ) ಯೋಚಿಸಿದನು:

[[೧] ಅವನ ಮನಸ್ಸಿನಲ್ಲಿ.
[೨] ಆಸ್ತಿಕ್ಯಬುದ್ಧಿ.
[೩] ತನ್ನ ತಂದೆಗೆ ಒಳ್ಳೆಯದಾಗಲೆಂಬ ಕಾರಣದಿಂದ.]

**ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।**
**ಅನಂದಾ ನಾಮ ತೇ ಲೋಕಾಸ್ತಾನ್ ಸ ಗಚ್ಛತಿ ತಾ ದದತ್ ॥ ೩ ॥**

**ಪೀತೋದಕಾಃ** = ನೀರುಕುಡಿದವುಗಳಾದ **ಜಗ್ಧತೃಣಾಃ** = ಹುಲ್ಲುಮೇದವುಗಳಾದ **ದುಗ್ಧದೋಹಾಃ** = ಹಾಲುಕರೆದವುಗಳಾದ **ನಿರಿಂದ್ರಿಯಾಃ** = ಇಂದ್ರಿಯವಿಹೀನಗಳಾದ **ತಾಃ**=ಅವುಗಳನ್ನು **ದದತ್ ಸಃ**=ಕೊಡುತ್ತಿರುವ ಅವನು **ಅನಂದಾಃ ನಾಮ** = ಅನಂದ ಎಂಬ [**ಯೇ**] **ತೇ ಲೋಕಾಃ** [**ಸಂತಿ**] = ಯಾವ ಆ ಲೋಕಗಳುಂಟೊ **ತಾನ್** = ಅವುಗಳನ್ನು **ಗಚ್ಛತಿ** = ಹೊಂದುತ್ತಾನೆ.

**೩.** ನೀರುಕುಡಿದವುಗಳಾದ ಹುಲ್ಲುಮೇದವುಗಳಾದ ಹಾಲುಕರೆದವುಗಳಾದ ಇಂದ್ರಿಯವಿಹೀನಗಳಾದ[೧] ಹಸುಗಳನ್ನು ಕೊಡುವವನು ಅನಂದ[೨] ಎಂಬ ಆ [೩] ಲೋಕಗಳನ್ನು ಹೊಂದುತ್ತಾನೆ.

[[೧] ಇನ್ನು ಮುಂದೆ ನೀರುಕುಡಿಯಲು ಹುಲ್ಲುಮೇಯಲು ಹಾಲುಕರೆಯಲು ಕರುಹಾಕಲು ಶಕ್ತಿಯಿಲ್ಲದ ಹಸುಗಳು ಎಂದರ್ಥ.
[೨] ಸುಖವಿಲ್ಲದ.
[೩] ಪ್ರಸಿದ್ಧವಾದ.]

**ಸ ಹೋವಾಚ ಪಿತರಂ ತತ ಕಸ್ಮೈ ಮಾಂ ದಾಸ್ಯಸೀತಿ ।**
**ದ್ವಿತೀಯಂ ತೃತೀಯಂ ತಂ ಹೋವಾಚ ಮೃತ್ಯವೇ**
**ತ್ವಾ ದದಾಮೀತಿ ॥ ೪ ॥**

**ಸಃ** = ಅವನು **ಪಿತರಂ** = ತಂದೆಯನ್ನು ಕುರಿತು **ಉವಾಚ ಹ** = ಹೇಳಿದನು: **ತತ**=ತಂದೆಯೆ, **ಮಾಂ** = ನನ್ನನ್ನು **ಕಸ್ಮೈ** = ಯಾರಿಗೆ **ದಾಸ್ಯಸಿ** = ಕೊಡುತ್ತೀಯೆ **ಇತಿ** = ಎಂದು; **ದ್ವಿತೀಯಂ** = ಎರಡನೆಯ ಸಲವೂ **ತೃತೀಯಂ** = ಮೂರನೆಯ ಸಲವೂ [**ಅಪಿ ಸಃ ಪಿತರಂ ಉವಾಚ** = ಕೂಡ ಅವನು ತಂದೆಗೆ ಹೇಳಿದನು]; **ತಂ ಹ**=ಅವನನ್ನು ಕುರಿತು [**ಪಿತಾ**=ತಂದೆಯು] **ಉವಾಚ**=ಹೇಳಿದನು: **ತ್ವಾ**=ನಿನ್ನನ್ನು **ಮೃತ್ಯವೇ** = ಮೃತ್ಯುವಿಗೆ **ದದಾಮಿ** = ಕೊಡುತ್ತೇನೆ **ಇತಿ** = ಎಂದು.

**೪.** 'ತಂದೆಯೆ, ನನ್ನನ್ನು ಯಾರಿಗೆ ಕೊಡುತ್ತೀಯೆ?' ಎಂದು (ತನ್ನ) ತಂದೆಯನ್ನು ಅವನು ಕೇಳಿದನು;[೧] ಎರಡನೆಯ ಸಲವೂ ಮೂರನೆಯ ಸಲವೂ[೨]

(ಹೀಗೆ ತಂದೆಯನ್ನು ಅವನು ಪ್ರಶ್ನಿಸಿದನು). 'ನಿನ್ನನ್ನು ಮೃತ್ಯುವಿಗೆ ಕೊಡುತ್ತೇನೆ' ಎಂದು ತಂದೆಯು ಅವನಿಗೆ ಹೇಳಿದನು.[೩]

[[೧] ಹೀಗೆ ಯಜ್ಞವು ಪೂರ್ಣವಾಗದೆ ಇರುವುದರಿಂದ ಮಗನಾದ ತಾನು ಆತ್ಮಪ್ರದಾನದಿಂದಾದರೂ ಯಜ್ಞವನ್ನು ಪೂರ್ಣಗೊಳಿಸಿ ತಂದೆಗೆ ಆಗಬಹುದಾದ ಅನಿಷ್ಟಫಲವನ್ನು ನಿವಾರಿಸತಕ್ಕದ್ದು ಎಂದು ಯೋಚಿಸಿ ನಚಿಕೇತನು ತಂದೆಯನ್ನು ಪ್ರಶ್ನಿಸಿದನು.

[೨] ತಂದೆಯು ಉಪೇಕ್ಷೆಮಾಡಿದರೂ.

[೩] 'ಇವನು ಹುಡುಗಸ್ವಭಾವದವನಾಗಿಲ್ಲ' ಎಂದು ಕೋಪಿಸಿಕೊಂಡು.]

**ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ ।**
**ಕಿಂ ಸ್ವಿದ್ಯಮಸ್ಯ ಕರ್ತವ್ಯಂ ಯನ್ಮಯಾದ್ಯ ಕರಿಷ್ಯತಿ　　　॥ ೫ ॥**

**ಬಹೂನಾಂ** = ಬಹುಜನರಲ್ಲಿ **ಪ್ರಥಮಃ** = ಮೊದಲನೆಯವನಾಗಿ **ಏಮಿ** = ಹೋಗುತ್ತಿದ್ದೇನೆ, **ಬಹೂನಾಂ** = ಬಹುಜನರಲ್ಲಿ **ಮಧ್ಯಮಃ ಏಮಿ** = ಮಧ್ಯಮನಾಗಿ ಹೋಗುತ್ತಿದ್ದೇನೆ; [**ಮಮ ಪಿತಾ** = ನನ್ನ ತಂದೆಯು] **ಅದ್ಯ** = ಈಗ **ಮಯಾ** = ನನ್ನಿಂದ **ಯಮಸ್ಯ** = ಯಮನ **ಯತ್** = ಯಾವ **ಕರ್ತವ್ಯಂ** = ಕರ್ತವ್ಯವನ್ನು **ಕರಿಷ್ಯತಿ** = ಮಾಡಲಿರುವನೊ [**ತತ್ ಕರ್ತವ್ಯಂ** = ಆ ಕರ್ತವ್ಯವು] **ಕಿಂ ಸ್ವಿತ್** = ಯಾವುದಿರಬಹುದು?

**೫.** (ನಚಿಕೇತ): ಬಹುಜನರಲ್ಲಿ ಮೊದಲನೆಯವನಾಗಿ ಹೋಗುತ್ತಿದ್ದೇನೆ;[೧] ಬಹುಜನರಲ್ಲಿ ಮಧ್ಯಮನಾಗಿ ಹೋಗುತ್ತಿದ್ದೇನೆ.[೨] ಈಗ ನನ್ನಿಂದ[೩] ಯಮನ ಯಾವ ಕರ್ತವ್ಯವನ್ನು[೪] (ನನ್ನ ತಂದೆಯು) ಮಾಡಲಿರುವನೊ ಅದು ಯಾವುದಿರಬಹುದು?

[[೧] 'ಶಿಷ್ಯಾದಿವೃತ್ತಿಗಳಲ್ಲಿ ನಾನು ಮೊದಲನೆಯವನಾಗಿರುತ್ತೇನೆ'.

[೨] 'ಮಧ್ಯಮದರ್ಜೆಯ ಶಿಷ್ಯರಲ್ಲಿ ನಾನು ಮಧ್ಯಮನಾಗಿರುತ್ತೇನೆ, ಎಂದಿಗೂ ಅಧಮವೃತ್ತಿಯಿಂದ ನಡೆದುಕೊಂಡಿಲ್ಲ.'

[೩] 'ನನ್ನನ್ನು ಯಮನಿಗೆ ಕೊಡುವುದರಿಂದ.'

[೪] ಯಮನಿಗೆ ಆಗಬೇಕಾದ ಪ್ರಯೋಜನ.]

**ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾಽಪರೇ ।**
**ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ　॥ ೬ ॥**

**ಪೂರ್ವೇ** = ಪೂರ್ವಿಕರು **ಯಥಾ** = ಹೇಗೆ [**ವೃತ್ತಾಃ** = ನಡೆದುಕೊಂಡಿದ್ದರು ಎಂಬುದನ್ನು] **ಅನುಪಶ್ಯ** = ನೋಡು; **ತಥಾ** = ಹಾಗೆಯೇ **ಅಪರೇ** = ಇತರರು

[**ಯಥಾ ವರ್ತಂತೇ ತಾನ್ ಚ** = ಹೇಗೆ ನಡೆಯುತ್ತಿರುವರೊ ಅವರನ್ನೂ] **ಪ್ರತಿಪಶ್ಯ**=ನೋಡು; **ಮರ್ತ್ಯಃ** = ಮನುಷ್ಯನು **ಸಸ್ಯಂ ಇವ** = ಸಸ್ಯದಂತೆ **ಪಚ್ಯತೇ**=ಪಕ್ವವಾಗುತ್ತಾನೆ, **ಪುನಃ**=ಪುನಃ **ಸಸ್ಯಂ ಇವ**=ಸಸ್ಯದಂತೆ **ಆಜಾಯತೇ**=ಹುಟ್ಟುತ್ತಾನೆ.

೬. ಪೂರ್ವಿಕರು[೧] ಹೇಗೆ (ನಡೆದುಕೊಂಡಿದ್ದರೆಂಬುದನ್ನು) ನೋಡು;[೨] ಹಾಗೆಯೇ ಇತರರೂ[೩] (ಹೇಗಿದ್ದಾರೆಂಬುದನ್ನು) ನೋಡು. ಮನುಷ್ಯನು ಸಸ್ಯದಂತೆ ಪಕ್ವವಾಗುತ್ತಾನೆ,[೪] ಸಸ್ಯದಂತೆ ಪುನಃ ಹುಟ್ಟುತ್ತಾನೆ.

['ದಿಟವಾಗಿಯೂ ಪ್ರಯೋಜನವನ್ನು ಅಪೇಕ್ಷಿಸದೆ ಕ್ರೋಧವಶನಾಗಿ ನನ್ನ ತಂದೆಯು ಹೀಗೆ ಹೇಳಿರಬೇಕು. ಆದರೂ ಅವನ ಮಾತು ಸುಳ್ಳಾಗದಿರಲಿ' ಎಂದು ಯೋಚಿಸಿ ನಚಿಕೇತನು, 'ಏನು ಹೇಳಿಬಿಟ್ಟೆ' ಎಂದು ಶೋಕಾವಿಷ್ಟನಾದ ತಂದೆಗೆ ಹೇಳುತ್ತಾನೆ.

೧ ತಂದೆ, ಅಜ್ಜ ಮೊದಲಾದವರು.
೨ ಅವರ ನಡತೆಯನ್ನು ಅನುಸರಿಸುವುದು ಯುಕ್ತ.
೩ ವರ್ತಮಾನಕಾಲದ ಸಾಧುಗಳು.
೪ ಜೀರ್ಣವಾಗಿ ಸಾಯುತ್ತಾನೆ.]

**ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್ ।**
**ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಮ್ ॥ ೭ ॥**

**ವೈಶ್ವಾನರಃ** = ಅಗ್ನಿಯು **ಅತಿಥಿಃ [ಸನ್] ಬ್ರಾಹ್ಮಣಃ** = ಬ್ರಾಹ್ಮಣನಾದ ಅತಿಥಿಯಾಗಿ **ಗೃಹಾನ್**=ಮನೆಗಳನ್ನು **ಪ್ರವಿಶತಿ**=ಪ್ರವೇಶಿಸುತ್ತಾನೆ. **ತಸ್ಯ**=ಅವನಿಗೆ **ಏತಾಂ**= ಈ **ಶಾಂತಿಂ** = ಶಾಂತಿಯನ್ನು **ಕುರ್ವಂತಿ** = ಮಾಡುತ್ತಾರೆ. **ವೈವಸ್ವತ**= ಹೇ ಯಮನೆ, **ಉದಕಂ** = ನೀರನ್ನು **ಹರ** = ತೆಗೆದುಕೊಂಡು ಬಾ.

೭. (ಸಾಕ್ಷಾತ್) ಅಗ್ನಿಯೇ ಬ್ರಾಹ್ಮಣನಾದ ಅತಿಥಿಯಾಗಿ ಮನೆಗಳನ್ನು ಪ್ರವೇಶಿಸುತ್ತಾನೆ. ಅವನಿಗೆ ಈ ಶಾಂತಿಯನ್ನು[೧] ಮಾಡುತ್ತಾರೆ. ಹೇ ಯಮನೆ, ನೀರನ್ನು[೨] ತೆಗೆದುಕೊಂಡು ಬಾ.

[ನಚಿಕೇತನ ಮಾತನ್ನು ಕೇಳಿ ಅವನ ತಂದೆಯು ತನ್ನ ಸತ್ಯಕ್ಕಾಗಿ ಅವನನ್ನು ಯಮಸದನಕ್ಕೆ ಕಳುಹಿಸಿದನು. ನಚಿಕೇತನು ಯಮಭವನದಲ್ಲಿ ಮೂರು ರಾತ್ರಿಗಳವರೆಗೆ ಇದ್ದನು. ಮನೆಗೆ ಹಿಂತಿರುಗಿದ ಯಮನನ್ನು ಕುರಿತು ಅವನ ಹೆಂಡತಿಯೊ ಅಥವಾ ಅಮಾತ್ಯರೊ ಹೀಗೆ ಹೇಳಿದರು.

೧ ಪಾದ್ಯಾಸನಾದಿದಾನರೂಪ.
೨ ಪಾದಪ್ರಕ್ಷಾಳನಕ್ಕಾಗಿ.]

ಆಶಾಪ್ರತೀಕ್ಷೇ ಸಂಗತಂ ಸೂನೃತಾಂ
　　ಚೇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್ ।
ಏತದ್ವೃಂಕ್ತೇ ಪುರುಷಸ್ಯಾಲ್ಪಮೇಧಸೋ
　　ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ　　॥ ೮ ॥

ಯಸ್ಯ=ಯಾವನ ಗೃಹೇ=ಮನೆಯಲ್ಲಿ ಬ್ರಾಹ್ಮಣಃ=ಬ್ರಾಹ್ಮಣನು ಅನಶ್ನನ್=ಊಟಮಾಡದೆ ವಸತಿ=ವಾಸಿಸುವನೊ [ತಸ್ಯ=ಆ] ಅಲ್ಪಮೇಧಸಃ=ಅಲ್ಪಬುದ್ಧಿಯುಳ್ಳ ಪುರುಷಸ್ಯ=ಪುರುಷನ ಆಶಾಪ್ರತೀಕ್ಷೇ=ಆಶಾಪ್ರತೀಕ್ಷೆಗಳನ್ನೂ ಸಂಗತಂ=ಸತ್ಸಂಗದ ಫಲವನ್ನೂ ಸೂನೃತಾಂ=ಪ್ರಿಯವಾಕ್ಯದ ಫಲವನ್ನೂ ಇಷ್ಟಾಪೂರ್ತೇ=ಇಷ್ಟಾಪೂರ್ತಗಳನ್ನೂ ಸರ್ವಾನ್=ಎಲ್ಲ ಪುತ್ರಪಶೂನ್ ಚ=ಪುತ್ರಪಶುಗಳನ್ನೂ ಏತತ್ [ಸರ್ವಂ]=ಇವೆಲ್ಲವನ್ನೂ [ಸಃ=ಅವನು] ವೃಂಕ್ತೇ=ನಾಶಮಾಡುತ್ತಾನೆ.

೮. ಯಾವನ ಮನೆಯಲ್ಲಿ ಬ್ರಾಹ್ಮಣನು ಊಟವಿಲ್ಲದೆ ವಾಸಿಸುವನೊ, ಆ ಅಲ್ಪಬುದ್ಧಿಯುಳ್ಳ ಪುರುಷನ ಆಶಾಪ್ರತೀಕ್ಷೆಗಳು,[೧] ಸತ್ಸಂಗದ ಫಲ, ಪ್ರಿಯವಾಕ್ಯದ ಫಲ, ಇಷ್ಟಾಪೂರ್ತಗಳು,[೨] ಎಲ್ಲ ಪುತ್ರಪಶುಗಳು—ಇವೆಲ್ಲವನ್ನೂ (ಅವನು)[೩] ನಾಶಮಾಡುತ್ತಾನೆ.

[[೧] ಗೊತ್ತಿಲ್ಲದಿದ್ದರೂ ಹೊಂದಲು ಯೋಗ್ಯವಾದ ಇಷ್ಟಾರ್ಥಗಳ ಬಯಕೆಗೆ 'ಆಶೆ' ಎಂದು ಹೆಸರು. ಗೊತ್ತಿರುವ ಪ್ರಾಪ್ಯವಸ್ತುಗಳ ನಿರೀಕ್ಷಣಕ್ಕೆ 'ಪ್ರತೀಕ್ಷೆ' ಎಂದು ಹೆಸರು.

[೨] 'ಇಷ್ಟ' ಎಂದರೆ ಯಾಗದಿಂದುಂಟಾಗುವ ಫಲ. 'ಪೂರ್ತ' ಎಂದರೆ ಉದ್ಯಾನಾದಿಗಳನ್ನು ನಿರ್ಮಿಸುವುದರಿಂದ ಉಂಟಾಗುವ ಫಲ.

[೩] ಬ್ರಾಹ್ಮಣನಾದ ಅತಿಥಿ.]

ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽ-
　　ನಶ್ನನ್ ಬ್ರಹ್ಮನ್ನತಿಥಿರ್ನಮಸ್ಯಃ ।
ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು
　　ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ　　॥ ೯ ॥

ಬ್ರಹ್ಮನ್=ಹೇ ಬ್ರಾಹ್ಮಣ, ಅತಿಥಿಃ=ಅತಿಥಿಯೂ ನಮಸ್ಯಃ=ನಮಸ್ಕಾರಾರ್ಹನೂ [ಆದ ನೀನು] ಯತ್=ಯಾವ ಕಾರಣದಿಂದ ಮೇ=ನನ್ನ ಗೃಹೇ=ಮನೆಯಲ್ಲಿ ತಿಸ್ರಃ ರಾತ್ರೀಃ=ಮೂರು ರಾತ್ರಿಗಳು ಅನಶ್ನನ್=ಊಟಮಾಡದೆ ಅವಾತ್ಸೀಃ=ವಾಸಿಸಿದೆಯೊ ತಸ್ಮಾತ್=ಆದುದರಿಂದ ಬ್ರಹ್ಮನ್=ಹೇ ಬ್ರಾಹ್ಮಣ,

ತೇ = ನಿನಗೆ **ನಮಃ ಅಸ್ತು** = ನಮಸ್ಕಾರವಿರಲಿ, **ಮೇ** = ನನಗೆ **ಸ್ವಸ್ತಿ ಅಸ್ತು** = ಮಂಗಳವಾಗಲಿ; [**ಏಕೈಕಾಂ ರಾತ್ರಿಂ**] **ಪ್ರತಿ** = ಒಂದೊಂದು ರಾತ್ರಿಗೂ **ತ್ರೀನ್** = ಮೂರು **ವರಾನ್** = ವರಗಳನ್ನು **ವೃಣೀಷ್ವ** = ಪ್ರಾರ್ಥಿಸು.

**೯.** (ಯಮ): ಹೇ ಬ್ರಾಹ್ಮಣ, ಅತಿಥಿಯೂ ನಮಸ್ಕಾರಾರ್ಹನೂ ಆದ (ನೀನು) ನನ್ನ ಮನೆಯಲ್ಲಿ ಮೂರು ರಾತ್ರಿಗಳು ಊಟಮಾಡದೆ ವಾಸಿಸಿರುವೆ; ಆದುದರಿಂದ ಹೇ ಬ್ರಾಹ್ಮಣ, ನಿನಗೆ ನಮಸ್ಕಾರವಿರಲಿ, ನನಗೆ ಮಂಗಳವಾಗಲಿ;[೧] ಒಂದೊಂದು ರಾತ್ರಿಗೂ (ಒಂದೊಂದರಂತೆ) ಮೂರು ವರಗಳನ್ನು ಪ್ರಾರ್ಥಿಸು.

[[೧] 'ನೀನು ನನ್ನ ಮನೆಯಲ್ಲಿ ಊಟಮಾಡದೆ ವಾಸಿಸಿದ ಕಾರಣದಿಂದ ಉಂಟಾದ ದೋಷವು ಪರಿಹಾರವಾಗಿ ನನಗೆ ಸ್ವಸ್ತಿಯಾಗಲಿ.']

**ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾದ್-**
**ವೀತಮನ್ಯುರ್ಗೌತಮೋ ಮಾಭಿ ಮೃತ್ಯೋ ।**
**ತ್ವತ್ಪ್ರಸೃಷ್ಟಂ ಮಾಭಿವದೇತ್ ಪ್ರತೀತ**
**ಏತತ್ ತ್ರಯಾಣಾಂ ಪ್ರಥಮಂ ವರಂ ವೃಣೇ ॥ ೧೦ ॥**

**ಮೃತ್ಯೋ** = ಎಲೈ ಮೃತ್ಯುವೆ, **ಗೌತಮಃ** = ಗೌತಮನು **ಮಾ ಅಭಿ** = ನನ್ನ ವಿಷಯದಲ್ಲಿ **ಶಾಂತಸಂಕಲ್ಪಃ** = ಶಾಂತಸಂಕಲ್ಪನೂ **ಸುಮನಾಃ** = ಪ್ರಸನ್ನಚಿತ್ತನೂ [**ಚ**=ಮತ್ತು] **ವೀತಮನ್ಯುಃ**=ಕ್ರೋಧರಹಿತನೂ **ಯಥಾ ಸ್ಯಾತ್**=ಹೇಗೆ ಆಗುವನೊ [**ಚ**=ಮತ್ತು] **ತ್ವತ್ಪ್ರಸೃಷ್ಟಂ** = ನಿನ್ನಿಂದ ಕಳುಹಿಸಲ್ಪಟ್ಟ **ಮಾ** = ನನ್ನನ್ನು **ಪ್ರತೀತಃ** = ಗುರುತಿಸುವವನಾಗಿ [**ಯಥಾ**] **ಅಭಿವದೇತ್** = ಹೇಗೆ ಮಾತನಾಡಿಸುವನೊ [**ತಥಾ ಕುರು** = ಹಾಗೆ ಮಾಡು]; **ತ್ರಯಾಣಾಂ** = ಮೂರು ವರಗಳಲ್ಲಿ **ಏತತ್** = ಈ **ಪ್ರಥಮಂ** = ಮೊದಲನೆಯ **ವರಂ** = ವರವನ್ನು **ವೃಣೇ** = ಪ್ರಾರ್ಥಿಸುತ್ತೇನೆ.

**೧೦.** (ನಚಿಕೇತ): ಹೇ ಮೃತ್ಯು, ನನ್ನ ವಿಷಯದಲ್ಲಿ ಗೌತಮನು ಶಾಂತಸಂಕಲ್ಪನೂ[೧] ಪ್ರಸನ್ನಚಿತ್ತನೂ ಕ್ರೋಧರಹಿತನೂ ಆಗಲಿ; ಮತ್ತು ನಿನ್ನಿಂದ ಕಳುಹಿಸಲ್ಪಟ್ಟ ನನ್ನನ್ನು ಗುರುತಿಸಿ[೨] ಮಾತನಾಡಿಸಲಿ; ಮೂರು ವರಗಳಲ್ಲಿ ಈ ಮೊದಲನೆಯ ವರವನ್ನು ಪ್ರಾರ್ಥಿಸುತ್ತೇನೆ.

[[೧] 'ಯಮನ ಸಮೀಪಕ್ಕೆ ಹೋದ ನನ್ನ ಮಗನು ಏನು ಮಾಡುವನೊ?' ಎಂಬ ಕಳವಳವು ಹೋಗಲಿ.

[೨] 'ಆ ನನ್ನ ಮಗನೇ ಬಂದಿರುವನು' ಎಂದು.]

ಯಥಾ ಪುರಸ್ತಾದ್ಭವಿತಾ ಪ್ರತೀತ
ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ ।
ಸುಖಂ ರಾತ್ರೀಃ ಶಯಿತಾ ವೀತಮನ್ಯು-
ಸ್ತ್ವಾಂ ದದೃಶಿವಾನ್ ಮೃತ್ಯುಮುಖಾತ್
ಪ್ರಮುಕ್ತಮ್ ॥ ೧೧ ॥

ಔದ್ದಾಲಕಿಃ ಆರುಣಿಃ=ಔದ್ದಾಲಕಿ ಆರುಣಿಯು ಮತ್ಪ್ರಸೃಷ್ಟಃ [ಸನ್]=ನನ್ನ ಅನುಜ್ಞೆಯನ್ನು ಪಡೆದವನಾಗಿ ಯಥಾ ಪುರಸ್ತಾತ್=ಪೂರ್ವದಂತೆ ಪ್ರತೀತಃ ಭವಿತಾ [ಸ್ಯಾತ್]=ಗುರುತಿಸುವವನಾಗುತ್ತಾನೆ; ಮೃತ್ಯುಮುಖಾತ್=ಮೃತ್ಯುಮುಖದಿಂದ ಪ್ರಮುಕ್ತಂ [ಸಂತಂ]=ಮುಕ್ತನಾಗಿರುವ ತ್ವಾಂ=ನಿನ್ನನ್ನು ದದೃಶಿವಾನ್ [ಸನ್]=ನೋಡಿದವನಾಗಿ ವೀತಮನ್ಯುಃ [ಸ್ಯಾತ್]=ಕೋಪರಹಿತನಾಗುತ್ತಾನೆ; ರಾತ್ರೀಃ=ರಾತ್ರಿಗಳಲ್ಲಿ ಸುಖಂ=ಸುಖವಾಗಿ ಶಯಿತಾ [ಸ್ಯಾತ್]=ನಿದ್ರಿಸುವವನಾಗುತ್ತಾನೆ.

೧೧. (ಯಮ): ಔದ್ದಾಲಕಿ ಆರುಣಿಯು[1] ನನ್ನ ಅನುಜ್ಞೆಯನ್ನು ಪಡೆದವನಾಗಿ ಪೂರ್ವದಂತೆ (ನಿನ್ನನ್ನು) ಗುರುತಿಸುತ್ತಾನೆ; ಮೃತ್ಯುಮುಖದಿಂದ ಬಿಡಲ್ಪಟ್ಟ ನಿನ್ನನ್ನು ನೋಡಿ ಕೋಪವಿಲ್ಲದವನಾಗುತ್ತಾನೆ (ಮತ್ತು) ರಾತ್ರಿಗಳಲ್ಲಿ ಸುಖವಾಗಿ ನಿದ್ರಿಸುತ್ತಾನೆ.

[[1] ಔದ್ದಾಲಕಿ ಎಂದರೆ ಉದ್ದಾಲಕ. ಆರುಣಿ ಎಂದರೆ ಅರುಣನ ಮಗನು; ಅಥವಾ ದ್ವ್ಯಾಮುಷ್ಯಾಯಣನಾಗಿರಬಹುದು. ಒಬ್ಬನಿಗೆ ಜನಿಸಿ ಇನ್ನೊಬ್ಬನಿಗೂ ವಾಗ್ದಾನದಂತೆ ದತ್ತಪುತ್ರನಾಗಿರುವವನಿಗೆ ದ್ವ್ಯಾಮುಷ್ಯಾಯಣ ಎಂದು ಹೆಸರು.]

ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ
ನ ತತ್ರ ತ್ವಂ ನ ಜರಯಾ ಬಿಭೇತಿ ।
ಉಭೇ ತೀರ್ತ್ವಾ ಅಶನಾಯಾಪಿಪಾಸೇ
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೨ ॥

ಸ್ವರ್ಗೇ ಲೋಕೇ=ಸ್ವರ್ಗಲೋಕದಲ್ಲಿ ಕಿಂಚನ ಭಯಂ=ಯಾವ ಭಯವೂ ನ ಅಸ್ತಿ=ಇಲ್ಲ; ತತ್ರ=ಅಲ್ಲಿ ತ್ವಂ=ನೀನು ನ=ಇಲ್ಲ, ಜರಯಾ=ಮುಪ್ಪಿನಿಂದ ನ ಬಿಭೇತಿ=ಹೆದರುವುದಿಲ್ಲ; ಅಶನಾಯಾಪಿಪಾಸೇ ಉಭೇ=ಹಸಿವು ಬಾಯಾರಿಕೆ ಇವೆರಡನ್ನು ತೀರ್ತ್ವಾ=ದಾಟಿ ಶೋಕಾತಿಗಃ=ಶೋಕವನ್ನು ಮೀರಿದವನಾಗಿ ಸ್ವರ್ಗಲೋಕೇ=ಸ್ವರ್ಗಲೋಕದಲ್ಲಿ ಮೋದತೇ=ಸಂತೋಷಪಡುತ್ತಾನೆ.

೧೨. (ನಚಿಕೇತ): ಸ್ವರ್ಗಲೋಕದಲ್ಲಿ ಯಾವ ಭಯವೂ ಇರುವುದಿಲ್ಲ.[೧] ನೀನು ಅಲ್ಲಿಲ್ಲ, ಮುಪ್ಪಿನಿಂದ (ಯಾವನೂ) ಹೆದರುವುದಿಲ್ಲ.[೨] ಹಸಿವು ಬಾಯಾರಿಕೆಗಳೆರಡನ್ನು ದಾಟಿ ಶೋಕವನ್ನು ಮೀರಿದವನಾಗಿ[೩] ಸ್ವರ್ಗಲೋಕದಲ್ಲಿ[೪] ಸಂತೋಷಪಡುತ್ತಾನೆ.

[[೧] ರೋಗಾದಿನಿಮಿತ್ತದಿಂದ.
[೨] ಈ ಲೋಕದಂತೆ.
[೩] ಮಾನಸದುಃಖವಿಲ್ಲದವನಾಗಿ.
[೪] ಆದಿತ್ಯಲೋಕದಲ್ಲಿ.]

**ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ**
**ಪ್ರಬ್ರೂಹಿ ತಂ ಶ್ರದ್ದಧಾನಾಯ ಮಹ್ಯಮ್ ।**
**ಸ್ವರ್ಗಲೋಕಾ ಅಮೃತತ್ವಂ ಭಜಂತ**
**ಏತದ್ದ್ವಿತೀಯೇನ ವೃಣೇ ವರೇಣ ॥ ೧೩ ॥**

**ಮೃತ್ಯೋ**=ಹೇ ಮೃತ್ಯು **ಸಃ ತ್ವಂ**=ಆ ನೀನು **ಸ್ವರ್ಗ್ಯಂ**=ಸ್ವರ್ಗಪ್ರಾಪ್ತಿಗೆ ಸಾಧನಭೂತವಾದ **ಅಗ್ನಿಂ**=ಅಗ್ನಿಯನ್ನು **ಅಧ್ಯೇಷಿ**=ತಿಳಿದಿರುವೆ; **ಶ್ರದ್ದಧಾನಾಯ**=ಶ್ರದ್ಧೆಯುಳ್ಳ **ಮಹ್ಯಂ**=ನನಗೆ **ತಂ**=ಅದನ್ನು **ಪ್ರಬ್ರೂಹಿ**=ಹೇಳಿಕೊಡು. **ಸ್ವರ್ಗಲೋಕಾಃ**=ಸ್ವರ್ಗಲೋಕದವರು **ಅಮೃತತ್ವಂ**=ಅಮೃತತ್ವವನ್ನು **ಭಜಂತೇ**=ಪಡೆಯುತ್ತಾರೆ; **ಏತತ್**=ಇದನ್ನು **ದ್ವಿತೀಯೇನ ವರೇಣ**=ಎರಡನೆಯ ವರದಿಂದ **ವೃಣೇ**=ಪ್ರಾರ್ಥಿಸುತ್ತೇನೆ.

೧೩. ಹೇ ಮೃತ್ಯು, ಆ ನೀನು ಸ್ವರ್ಗಪ್ರಾಪ್ತಿಗೆ ಸಾಧನಭೂತವಾದ ಅಗ್ನಿಯನ್ನು ತಿಳಿದಿರುವೆ. ಶ್ರದ್ಧೆಯುಳ್ಳ ನನಗೆ ಅದನ್ನು ಹೇಳಿಕೊಡು. ಸ್ವರ್ಗಲೋಕದವರು[೧] ಅಮೃತತ್ವವನ್ನು[೨] ಪಡೆಯುತ್ತಾರೆ. ಇದನ್ನು ಎರಡನೆಯ ವರದಿಂದ ಪ್ರಾರ್ಥಿಸುತ್ತೇನೆ.

[[೧] ಅಗ್ನಿಚಯನದಿಂದ ಸ್ವರ್ಗಲೋಕವನ್ನು ಪಡೆದವರು.
[೨] ಇದು ಆತ್ಯಂತಿಕ ಮೋಕ್ಷವಲ್ಲ, ದೇವತ್ವವನ್ನು ಹೊಂದುವಿಕೆ.]

**ಪ್ರ ತೇ ಬ್ರವೀಮಿ ತದು ಮೇ ನಿಬೋಧ**
**ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।**
**ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ**
**ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥ ೧೪ ॥**

**ನಚಿಕೇತಃ**=ಹೇ ನಚಿಕೇತನೆ, **ಸ್ವರ್ಗ್ಯಂ ಅಗ್ನಿಂ**=ಸ್ವರ್ಗಕ್ಕೆ ಸಾಧನವಾದ ಅಗ್ನಿಯನ್ನು **ಪ್ರಜಾನನ್**=ತಿಳಿದವನಾಗಿ **ತೇ**=ನಿನಗೆ **ಪ್ರಬ್ರವೀಮಿ**=ಹೇಳುತ್ತೇನೆ; **ತತ್ ಉ**=ಅದನ್ನು **ಮೇ**=ನನ್ನಿಂದ **ನಿಬೋಧ**=ತಿಳಿದುಕೊ; **ತ್ವಂ**=ನೀನು **ಅನಂತಲೋಕಾಪ್ತಿಂ**=ಸ್ವರ್ಗಲೋಕಸಾಧನವಾದ **ಅಥೋ**=ಮತ್ತು **ಪ್ರತಿಷ್ಠಾಂ**=ಆಶ್ರಯವಾದ **ಗುಹಾಯಾಂ**=ಬುದ್ಧಿಯಲ್ಲಿ **ನಿಹಿತಂ**=ಇಡಲ್ಪಟ್ಟ **ಏತಂ**=ಈ [ಅಗ್ನಿಯನ್ನು] **ವಿದ್ಧಿ**=ತಿಳಿದುಕೊ.

**೧೪.** ಹೇ ನಚಿಕೇತ, ಸ್ವರ್ಗಸಾಧನವಾದ ಅಗ್ನಿಯನ್ನು ತಿಳಿದವನಾಗಿ ನಿನಗೆ ಹೇಳುತ್ತೇನೆ; ಅದನ್ನು ನನ್ನಿಂದ ತಿಳಿದುಕೊ. ಸ್ವರ್ಗಲೋಕಸಾಧನವೂ (ಜಗತ್ತಿಗೆ) ಆಶ್ರಯವೂ[೧] ಮತ್ತು ಬುದ್ಧಿಯಲ್ಲಿ[೨] ಇಡಲ್ಪಟ್ಟಿರುವುದೂ ಆದ ಈ (ಅಗ್ನಿಯನ್ನು) ತಿಳಿದುಕೊ.

[[೧] ವಿರಾಟ್ ಸ್ವರೂಪದಿಂದ.
[೨] ಅಗ್ನಿವಿದ್ಯೆಯನ್ನು ತಿಳಿದ ಉಪಾಸಕರ.]

**ಲೋಕಾದಿಮಗ್ನಿಂ ತಮುವಾಚ ತಸ್ಮೈ**
**ಯಾ ಇಷ್ಟಕಾ ಯಾವತೀರ್ವಾ ಯಥಾ ವಾ ।**
**ಸ ಚಾಪಿ ತತ್ ಪ್ರತ್ಯವದದ್ಯಥೋಕ್ತ-**
**ಮಥಾಸ್ಯ ಮೃತ್ಯುಃ ಪುನರೇವಾಹ ತುಷ್ಟಃ　　॥ ೧೫ ॥**

[ಯಮಃ=ಯಮನು] **ತಸ್ಮೈ**=ಅವನಿಗೆ **ಲೋಕಾದಿಂ**=ಲೋಕಗಳಿಗೆ ಆದಿಯಾದ **ಅಗ್ನಿಂ**=ಅಗ್ನಿಯನ್ನು **ಉವಾಚ**=ಹೇಳಿದನು: **ಯಾಃ**=ಎಂಥ **ಯಾವತೀಃ ವಾ**=ಎಷ್ಟು **ಇಷ್ಟಕಾಃ**=ಇಟ್ಟಿಗೆಗಳು **ಯಥಾ ವಾ**=ಹೇಗೆ ಮಾಡಬೇಕು [ಇವೆಲ್ಲವನ್ನೂ ಹೇಳಿದನು]. **ಸಃ ಚ ಅಪಿ**=ಅವನೂ **ತತ್**=ಅದನ್ನು **ಯಥೋಕ್ತಂ**=ಹೇಳಿದಂತೆಯೇ **ಪ್ರತ್ಯವದತ್**=ಪುನರುಚ್ಚಾರಮಾಡಿದನು. **ಅಥ**=ಅನಂತರ **ಮೃತ್ಯುಃ**=ಯಮನು **ತುಷ್ಟಃ**=ಸಂತುಷ್ಟನಾಗಿ **ಪುನಃ ಏವ**=ಮತ್ತೂ **ಆಹ**=ಹೇಳಿದನು.

**೧೫.** (ಯಮನು) ಅವನಿಗೆ ಲೋಕಗಳಿಗೆ ಆದಿಯಾದ[೧] ಅಗ್ನಿಯನ್ನು ಹೇಳಿಕೊಟ್ಟನು: ಎಂಥ ಮತ್ತು ಎಷ್ಟು ಇಟ್ಟಿಗೆಗಳು (ವೇದಿಗೆ ಬೇಕಾಗಿರುವವೆಂಬುದನ್ನೂ), ಹೇಗೆ (ಅಗ್ನಿಚಯನ ಮಾಡಬೇಕೆಂಬುದನ್ನೂ ಹೇಳಿದನು). ಮತ್ತು ಅವನೂ (ತನಗೆ) ಹೇಳಿದಂತೆಯೇ ಪುನರುಚ್ಚಾರಮಾಡಿದನು. ಅನಂತರ ಮೃತ್ಯುವು ಸಂತುಷ್ಟನಾಗಿ ಮತ್ತೂ ಹೇಳಿದನು.[೨]

[ಇದು ಶ್ರುತಿಯ ವಚನ.

[1] ಪ್ರಥಮಶರೀರಿಯಾದ ವಿರಾಜನು.
[2] ಮೂರು ವರಗಳಲ್ಲದೆ ಮತ್ತೊಂದು ವರವನ್ನು ಕೊಡಬೇಕೆಂದು.]

**ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ**
**ವರಂ ತವೇಹಾದ್ಯ ದದಾಮಿ ಭೂಯಃ ।**
**ತವೈವ ನಾಮ್ನಾ ಭವಿತಾಯಮಗ್ನಿಃ**
**ಸೃಂಕಾಂ ಚೇಮಾಮನೇಕರೂಪಾಂ ಗೃಹಾಣ ॥ ೧೬ ॥**

**ಪ್ರೀಯಮಾಣಃ** = ಪ್ರೀತಿಯುಳ್ಳವನಾದ **ಮಹಾತ್ಮಾ** = ಮಹಾತ್ಮನು **ತಂ** = ಅವನನ್ನು ಕುರಿತು **ಅಬ್ರವೀತ್** = ಹೇಳಿದನು: **ಇಹ** = ಇಲ್ಲಿ **ಅದ್ಯ** = ಈಗ **ತವ** = ನಿನಗೆ **ಭೂಯಃ**=ಪುನಃ **ವರಂ**=ವರವನ್ನು **ದದಾಮಿ**=ಕೊಡುತ್ತೇನೆ; **ಅಯಂ**=ಈ **ಅಗ್ನಿಃ** = ಅಗ್ನಿಯು **ತವ ಏವ ನಾಮ್ನಾ**=ನಿನ್ನ ಹೆಸರಿನಿಂದಲೇ [ಪ್ರಸಿದ್ಧಃ] **ಭವಿತಾ** = ಪ್ರಸಿದ್ಧವಾಗುವುದು; **ಚ**=ಮತ್ತು **ಇಮಾಂ**=ಈ **ಅನೇಕರೂಪಾಂ** = ಅನೇಕರೂಪವಾಗಿರುವ **ಸೃಂಕಾಂ** = ಮಾಲೆಯನ್ನು **ಗೃಹಾಣ** = ತೆಗೆದುಕೊ.

**೧೬.** ಆ ಮಹಾತ್ಮನು[1] ಪ್ರೀತಿಯುಳ್ಳವನಾಗಿ[2] ಅವನಿಗೆ ಹೇಳಿದನು: 'ಇಲ್ಲಿ ಈಗ ನಿನಗೆ ಮತ್ತೊಂದು[3] ವರವನ್ನು ಕೊಡುತ್ತೇನೆ. ಈ ಅಗ್ನಿಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವುದು; ಮತ್ತು ಅನೇಕರೂಪವಾಗಿರುವ[4] ಈ ಮಾಲೆಯನ್ನು[5] ತೆಗೆದುಕೊ.'

[[1] ಕ್ಷುದ್ರಬುದ್ಧಿಯಿಲ್ಲದ ಯಮನು.
[2] ಶಿಷ್ಯನ ಯೋಗ್ಯತೆಯನ್ನು ನೋಡಿ.
[3] ನಾಲ್ಕನೆಯ ವರ.
[4] ವಿಚಿತ್ರವಾಗಿರುವ.
[5] 'ಸೃಂಕಾ' ಎಂಬ ಪದಕ್ಕೆ ಕರ್ಮಮಯವಾದ ಗತಿ ಎಂದು ಹೇಳಬಹುದು. ಅನೇಕಫಲಗಳಿಗೆ ಕಾರಣವಾಗಿರುವುದರಿಂದ ಬೇರೆ ಕರ್ಮಜ್ಞಾನವನ್ನು ಸ್ವೀಕರಿಸು ಎಂದರ್ಥ.]

**ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ**
**ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ ।**
**ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ**
**ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥ ೧೭ ॥**

ತ್ರಿಭಿಃ=ಮೂರರಿಂದ ಸಂಧಿಂ=ಸಂಧಿಯನ್ನು ಏತ್ಯ=ಪಡೆದು ತ್ರಿಣಾಚಿಕೇತಃ= ತ್ರಿಣಾಚಿಕೇತನಾದವನು ತ್ರಿಕರ್ಮಕೃತ್=ಮೂರು ಕರ್ಮಗಳನ್ನು ಮಾಡಿದವನು ಜನ್ಮಮೃತ್ಯೂ=ಜನ್ಮಮೃತ್ಯುಗಳನ್ನು ತರತಿ=ದಾಟುತ್ತಾನೆ; ಬ್ರಹ್ಮ-ಜ-ಜ್ಞಂ= ಬ್ರಹ್ಮಜಜ್ಞನಾದ ಈಡ್ಯಂ=ಸ್ತುತ್ಯರ್ಹನಾದ ದೇವಂ=ದೇವನನ್ನು ವಿದಿತ್ವಾ=ತಿಳಿದು ಕೊಂಡು ನಿಚಾಯ್ಯ=ಸಾಕ್ಷಾತ್ಕಾರಮಾಡಿಕೊಂಡು ಇಮಾಂ=ಈ ಶಾಂತಿಂ= ಶಾಂತಿಯನ್ನು ಅತ್ಯಂತಂ=ಅತ್ಯಂತವಾಗಿ ಏತಿ=ಹೊಂದುತ್ತಾನೆ.

೧೭. ಮೂರರಿಂದ[1] ಸಂಧಿಯನ್ನು ಪಡೆದು ಮೂರು ಸಲ ಅಗ್ನಿ ಚಯನಮಾಡಿದವನು[2] ಮತ್ತು ಮೂರು ಕರ್ಮಗಳನ್ನು ಮಾಡಿದವನು[3] ಜನ್ಮ ಮೃತ್ಯುಗಳನ್ನು ದಾಟುತ್ತಾನೆ. ಬ್ರಹ್ಮಜಜ್ಞನೂ[4] ಸ್ತುತ್ಯರ್ಹನೂ ಆದ ದೇವ ನನ್ನು[5] ತಿಳಿದು,[6] ಸಾಕ್ಷಾತ್ಕರಿಸಿ[7] ಈ ಶಾಂತಿಯನ್ನು ಅತ್ಯಂತವಾಗಿ ಹೊಂದು ತ್ತಾನೆ.[8]

[[1] ತಾಯಿ ತಂದೆ ಆಚಾರ್ಯ ಇವರಿಂದ ಉಪದೇಶವನ್ನು ಸರಿಯಾಗಿ ಪಡೆದು ಅಥವಾ ವೇದ ಸ್ಮೃತಿ ಶಿಷ್ಟರು ಇವರಿಂದಾಗಲಿ, ಪ್ರತ್ಯಕ್ಷ ಅನುಮಾನ ಆಗಮ ಇವು ಗಳಿಂದಾಗಲಿ ಉಪದೇಶವನ್ನು ಪಡೆದು.

[2] ಮೂರು ಸಲ ನಾಚಿಕೇತವೆಂಬ ಅಗ್ನಿಯನ್ನು ಚಯನಮಾಡಿದವನು ಅಥವಾ ಅದನ್ನು ತಿಳಿದುಕೊಂಡು ಅಧ್ಯಯನಮಾಡಿ ಅನುಷ್ಠಾನಮಾಡಿದವನು.

[3] ಯಜ್ಞ, ಅಧ್ಯಯನ, ದಾನ ಎಂಬ ಮೂರು ಕರ್ಮಗಳನ್ನು ಮಾಡಿದವನು.

[4] ಬ್ರಹ್ಮಜನೂ ಜ್ಞಾತೃವೂ ಆಗಿರುವುದರಿಂದ ಬ್ರಹ್ಮಜಜ್ಞನು; ಎಂದರೆ ಸರ್ವಜ್ಞ.

[5] ಜ್ಞಾನಾದಿಗುಣಗಳಿಂದ ಪ್ರಕಾಶಿಸುತ್ತಿರುವ ಅಗ್ನಿ.

[6] ಶಾಸ್ತ್ರದಿಂದ.

[7] ತನ್ನ ಸ್ವರೂಪವು ಎಂದು ಸಾಕ್ಷಾತ್ಕಾರಮಾಡಿಕೊಂಡು.

[8] ಜ್ಞಾನಕರ್ಮಸಮುಚ್ಚಯದ ಅನುಷ್ಠಾನದಿಂದ ವಿರಾಜಪದವಿಯನ್ನು ಪಡೆಯು ತ್ತಾನೆ ಎಂದರ್ಥ.]

**ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ**
**ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್ ।**
**ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ**
**ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧೮ ॥**

ತ್ರಿಣಾಚಿಕೇತಃ ಯಃ=ತ್ರಿಣಾಚಿಕೇತನಾದ ಯಾವನು ಏತತ್=ಈ ತ್ರಯಂ= ಮೂರನ್ನೂ ವಿದಿತ್ವಾ=ತಿಳಿದುಕೊಂಡು, ಏವಂ=ಹೀಗೆ ವಿದ್ವಾನ್=ಅರಿತವನಾಗಿ

**ನಾಚಿಕೇತಂ**=ನಾಚಿಕೇತಾಗ್ನಿಯನ್ನು **ಚಿನುತೇ**=ಚಯನಮಾಡುತ್ತಾನೆಯೊ **ಸಃ**=ಅವನು **ಮೃತ್ಯುಪಾಶಾನ್**=ಮೃತ್ಯುಪಾಶಗಳನ್ನು **ಪುರತಃ**=ಮೊದಲೇ **ಪ್ರಣೋದ್ಯ**=ಬಿಡಿಸಿಕೊಂಡು **ಶೋಕಾತಿಗಃ**=ಶೋಕವನ್ನು ಮೀರಿದವನಾಗಿ **ಸ್ವರ್ಗಲೋಕೇ**=ಸ್ವರ್ಗಲೋಕದಲ್ಲಿ **ಮೋದತೇ**=ಸಂತೋಷಪಡುತ್ತಾನೆ.

**೧೮.** ತ್ರಿಣಾಚಿಕೇತನಾದ ಯಾವನು ಈ ಮೂರನ್ನೂ[೧] ತಿಳಿದುಕೊಂಡು, ಹೀಗೆ ಅರಿತವನಾಗಿ[೨] ನಾಚಿಕೇತಾಗ್ನಿಯನ್ನು[೩] ಚಯನಮಾಡುತ್ತಾನೆಯೊ ಅವನು ಮೃತ್ಯುಪಾಶಗಳನ್ನು[೪] ಮೊದಲೇ[೫] ಬಿಡಿಸಿಕೊಂಡು ಶೋಕವನ್ನು[೬] ಮೀರಿದವನಾಗಿ ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ.[೭]

[[೧] ಎಂಥ ಇಟ್ಟಿಗೆಗಳು, ಎಷ್ಟು ಮತ್ತು ಹೇಗೆ ಅಗ್ನಿಚಯನಮಾಡುವುದು.
[೨] ತನ್ನ ಸ್ವರೂಪದಿಂದಲೇ ಅಗ್ನಿಯನ್ನು ಅರಿತು.
[೩] ಕ್ರತುವನ್ನು.
[೪] ಅಧರ್ಮ ಅಜ್ಞಾನ ರಾಗ ದ್ವೇಷ ಮುಂತಾದುವುಗಳನ್ನು.
[೫] ಶರೀರಪಾತಕ್ಕೆ ಮೊದಲೇ.
[೬] ಮಾನಸಿಕ ದುಃಖಗಳನ್ನು.
[೭] ವಿರಾಜಲೋಕದಲ್ಲಿ ವಿರಾಡಾತ್ಮಸ್ವರೂಪವನ್ನು ಹೊಂದಿ ಸಂತೋಷಪಡುತ್ತಾನೆ.]

**ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯೋ**
**ಯಮವೃಣೀಥಾ ದ್ವಿತೀಯೇನ ವರೇಣ ।**
**ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸ-**
**ಸ್ತೃತೀಯಂ ವರಂ ನಚಿಕೇತೋ ವೃಣೀಷ್ವ ॥ ೧೯ ॥**

**ನಚಿಕೇತಃ**=ಹೇ ನಚಿಕೇತನೆ, **ಯಂ**=ಯಾವುದನ್ನು **ದ್ವಿತೀಯೇನ ವರೇಣ**=ಎರಡನೆಯ ವರದಿಂದ **ಅವೃಣೀಥಾಃ**=ಪ್ರಾರ್ಥಿಸಿದ್ದೆಯೊ **ಏಷಃ**=ಇದೇ **ತೇ**=ನಿನಗೆ **ಸ್ವರ್ಗ್ಯಃ**=ಸ್ವರ್ಗಸಾಧನವಾದ **ಅಗ್ನಿಃ**=ಅಗ್ನಿಯು; **ಜನಾಸಃ**=ಜನರು **ಏತಂ ಅಗ್ನಿಂ**=ಈ ಅಗ್ನಿಯನ್ನು **ತವ ಏವ** [ನಾಮ್ನಾ]=ನಿನ್ನ ಹೆಸರಿನಿಂದಲೇ **ಪ್ರವಕ್ಷ್ಯಂತಿ**=ಕರೆಯುತ್ತಾರೆ. **ನಚಿಕೇತಃ**=ಹೇ ನಚಿಕೇತನೆ, **ತೃತೀಯಂ ವರಂ**=ಮೂರನೆಯ ವರವನ್ನು **ವೃಣೀಷ್ವ**=ಬೇಡಿಕೊ.

**೧೯.** ಹೇ ನಚಿಕೇತ, (ನೀನು) ಎರಡನೆಯ ವರದಿಂದ ಪ್ರಾರ್ಥಿಸಿಕೊಂಡ ಸ್ವರ್ಗಸಾಧನವಾದ ಅಗ್ನಿಯು ಇದೇ. ಈ ಅಗ್ನಿಯನ್ನು ನಿನ್ನ ಹೆಸರಿನಿಂದಲೇ ಜನರು ಕರೆಯುವರು. ಹೇ ನಚಿಕೇತ, ಮೂರನೆಯ ವರವನ್ನು ಬೇಡಿಕೊ.

**ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ-**
**ಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।**
**ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ**
**ವರಾಣಾಮೇಷ ವರಸ್ತೃತೀಯಃ ॥ ೨೦ ॥**

**ಮನುಷ್ಯೇ ಪ್ರೇತೇ**=ಮನುಷ್ಯನು ಸತ್ತಮೇಲೆ **ಯಾ ಇಯಂ ವಿಚಿಕಿತ್ಸಾ**=ಯಾವ ಈ ಸಂಶಯ (ಇದೆಯಷ್ಟೆ): **ಏಕೇ**=ಕೆಲವರು **ಅಸ್ತಿ ಇತಿ**=ಇದ್ದಾನೆ ಎಂದು [**ಆಹುಃ**=ಹೇಳುತ್ತಾರೆ]; **ಚ**=ಮತ್ತು **ಏಕೇ**=ಇನ್ನು ಕೆಲವರು **ಅಯಂ**=ಇವನು **ನ ಅಸ್ತಿ ಇತಿ**=ಇಲ್ಲವೆಂದು [**ಆಹುಃ**=ಹೇಳುತ್ತಾರೆ]; **ತ್ವಯಾ**=ನಿನ್ನಿಂದ **ಅನುಶಿಷ್ಟಃ**=ಉಪದಿಷ್ಟನಾಗಿ **ಅಹಂ**=ನಾನು **ಏತತ್**=ಇದನ್ನು **ವಿದ್ಯಾಂ**=ತಿಳಿಯಲಿಚ್ಛಿಸುತ್ತೇನೆ. **ವರಾಣಾಂ**=ವರಗಳಲ್ಲಿ **ಏಷಃ**=ಇದು **ತೃತೀಯಃ ವರಃ**=ಮೂರನೆಯ ವರ.

**೨೦.** (ನಚಿಕೇತ): ಮನುಷ್ಯನು ಸತ್ತಮೇಲೆ ಈ ಸಂಶಯವುಂಟು: ಕೆಲವರು (ಅವನು) ಇದ್ದಾನೆ ಎಂದು ಹೇಳುತ್ತಾರೆ, ಕೆಲವರು ಇವನು ಇಲ್ಲವೆಂದು ಹೇಳುತ್ತಾರೆ. ನಿನ್ನಿಂದ ಉಪದಿಷ್ಟನಾಗಿ ನಾನು ಇದನ್ನು ತಿಳಿಯಲಿಚ್ಛಿಸುತ್ತೇನೆ. ವರಗಳಲ್ಲಿ ಇದು ಮೂರನೆಯ ವರ.

[ಮೊದಲನೆಯ ಎರಡು ವರಗಳು ಆತ್ಮವಿಷಯಕ್ಕೆ ಸಂಬಂಧಪಟ್ಟಿಲ್ಲ; ಮೂರನೆಯ ವರಕ್ಕೆ ಆತ್ಮಜ್ಞಾನವೇ ವಿಷಯ. ಶರೀರೇಂದ್ರಿಯಗಳು ನಾಶವಾದ ಮೇಲೆ ಇವುಗಳಿಗಿಂತ ಭಿನ್ನವಾದ ಆತ್ಮವಸ್ತುವು ಇದೆಯೊ ಇಲ್ಲವೊ ಎಂಬ ವಿಚಾರದಲ್ಲಿ ಭ್ರಾಂತಿಯಿರುತ್ತದೆ. ಏಕೆಂದರೆ ಈ ವಿಷಯದಲ್ಲಿ ಪ್ರತ್ಯಕ್ಷದಿಂದಾಗಲಿ, ಅನುಮಾನದಿಂದಾಗಲಿ ನಿರ್ಣಯಜ್ಞಾನವು ಉಂಟಾಗುವುದಿಲ್ಲ. ಈ ನಿರ್ಣಯಜ್ಞಾನದಿಂದಲೇ ಪರಮಪುರುಷಾರ್ಥವು ಲಭಿಸುತ್ತದೆ.]

**ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ**
**ನ ಹಿ ಸುವಿಜ್ಞೇಯಮಣುರೇಷ ಧರ್ಮಃ ।**
**ಅನ್ಯಂ ವರಂ ನಚಿಕೇತೋ ವೃಣೀಷ್ವ**
**ಮಾ ಮೋಪರೋತ್ಸೀರತಿ ಮಾ ಸೃಜೈನಮ್ ॥ ೨೧ ॥**

**ಅತ್ರ**=ಇಲ್ಲಿ **ಪುರಾ**=ಹಿಂದೆ **ದೇವೈಃ ಅಪಿ**=ದೇವತೆಗಳಿಂದಲೂ **ವಿಚಿಕಿತ್ಸಿತಂ**=ಸಂಶಯಪಡಲ್ಪಟ್ಟಿತು. **ನ ಹಿ ಸುವಿಜ್ಞೇಯಂ**=(ಇದು) ಚೆನ್ನಾಗಿ ತಿಳಿಯತಕ್ಕದ್ದಲ್ಲ; **ಏಷಃ**=ಈ **ಧರ್ಮಃ**=ಧರ್ಮವು **ಅಣುಃ**=ಸೂಕ್ಷ್ಮವಾದುದು. **ನಚಿಕೇತಃ**=ಹೇ ನಚಿಕೇತನೆ, **ಅನ್ಯಂ**=ಬೇರೆ **ವರಂ**=ವರವನ್ನು **ವೃಣೀಷ್ವ**=ಬೇಡಿಕೊ.

**ಮಾಂ**=ನನ್ನನ್ನು **ಮಾ ಉಪರೋತ್ಸೀಃ**=ಒತ್ತಾಯಪಡಿಸಬೇಡ; **ಮಾ [ಮಾಂ ಪ್ರತಿ]**=ನನಗೆ **ಏನಂ**=ಇದನ್ನು **ಅತಿಸೃಜ**=ಬಿಟ್ಟುಕೊಡು.

**೨೧.** (ಯಮ): ಇಲ್ಲಿ[೧] ಹಿಂದೆ ದೇವತೆಗಳೂ ಕೂಡ ಸಂಶಯಪಟ್ಟಿದ್ದರು. ಇದನ್ನು ಚೆನ್ನಾಗಿ ತಿಳಿದುಕೊಳ್ಳಲು (ಸಾಮಾನ್ಯ ಜನರಿಗೆ) ಆಗುವುದಿಲ್ಲ; (ಏಕೆಂದರೆ) ಈ ಧರ್ಮವು[೨] ಸೂಕ್ಷ್ಮವಾದದ್ದು. ಹೇ ನಚಿಕೇತ, ಬೇರೊಂದು ವರವನ್ನು ಬೇಡಿಕೊ. ನನ್ನನ್ನು ಒತ್ತಾಯಪಡಿಸಬೇಡ; ಈ ವರವನ್ನು ಕೇಳಬೇಡ.

[[೧] ಆತ್ಮವಸ್ತುವಿನ ವಿಷಯದಲ್ಲಿ.
[೨] ಆತ್ಮವೆಂಬ.]

**ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ**
**ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ ।**
**ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ**
**ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥ ೨೨ ॥**

**ಅತ್ರ**=ಇಲ್ಲಿ **ದೇವೈಃ ಅಪಿ**=ದೇವತೆಗಳಿಂದಲೂ **ವಿಚಿಕಿತ್ಸಿತಂ ಕಿಲ**=ಸಂಶಯಪಡಲ್ಪಟ್ಟಿತಷ್ಟೆ; **ಮೃತ್ಯೋ**=ಹೇ ಯಮನೆ, **ತ್ವಂ ಚ**=ನೀನು ಕೂಡ **ಯತ್**=ಯಾವ ಕಾರಣದಿಂದ **ನ ಸುಜ್ಞೇಯಂ**=ಚೆನ್ನಾಗಿ ತಿಳಿಯತಕ್ಕದ್ದಲ್ಲವೆಂದು **ಆತ್ಥ**=ಹೇಳುತ್ತಿರುವೆ. **ಅಸ್ಯ**=ಇದರ, ಇದನ್ನು **ವಕ್ತಾ ಚ ತ್ವಾದೃಕ್ ಅನ್ಯಃ**=ಹೇಳುವ ನಿನ್ನಂತಹ ಬೇರೊಬ್ಬನು **ನ ಲಭ್ಯಃ**=ಲಭ್ಯನಲ್ಲ. **ಏತಸ್ಯ**=ಇದಕ್ಕೆ **ತುಲ್ಯಃ**=ಸಮಾನವಾದ **ಅನ್ಯಃ**=ಬೇರೆ **ಕಶ್ಚಿತ್**=ಯಾವ **ವರಃ**=ವರವೂ **ನ**=ಇಲ್ಲ.

**೨೨.** (ನಚಿಕೇತ): ಇಲ್ಲಿ ದೇವತೆಗಳೂ ಕೂಡ ಸಂಶಯಪಟ್ಟಿದ್ದರಷ್ಟೆ. ಹೇ ಯಮನೆ, ಇದು ಚೆನ್ನಾಗಿ ತಿಳಿಯತಕ್ಕದ್ದಲ್ಲವೆಂದು ನೀನೂ ಹೇಳುತ್ತಿರುವೆ. ಇದನ್ನು ಹೇಳುವ ನಿನ್ನಂತಹ ಬೇರೊಬ್ಬನು ಸಿಕ್ಕುವುದಿಲ್ಲ. ಇದಕ್ಕೆ ಸಮಾನವಾದ ಬೇರೆ ಯಾವ ವರವೂ[೧] ಇಲ್ಲ.

[[೧] ಈ ವರವು ನಿಃಶ್ರೇಯಸಪ್ರಾಪ್ತಿಗೆ ಕಾರಣವಾಗಿರುತ್ತದೆ. ಆದುದರಿಂದ ಇದಕ್ಕೆ ಸಮಾನವಾದುದು ಯಾವುದೂ ಇಲ್ಲ.]

**ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ**
**ಬಹೂನ್ ಪಶೂನ್ ಹಸ್ತಿಹಿರಣ್ಯಮಶ್ವಾನ್ ।**
**ಭೂಮೇರ್ಮಹದಾಯತನಂ ವೃಣೀಷ್ವ**
**ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ ೨೩ ॥**

ಶತಾಯುಷಃ=ಶತಾಯುಗಳಾದ ಪುತ್ರಪೌತ್ರಾನ್=ಪುತ್ರಪೌತ್ರರನ್ನು ವೃಣೀ-ಷ್ವ=ಬೇಡಿಕೊ; ಬಹೂನ್=ಬಹು ಪಶೂನ್=ಪಶುಗಳನ್ನೂ ಹಸ್ತಿಹಿರಣ್ಯಂ=ಹಸ್ತಿ ಹಿರಣ್ಯಗಳನ್ನೂ ಅಶ್ವಾನ್=ಕುದುರೆಗಳನ್ನೂ ಭೂಮೇಃ=ಭೂಮಿಯ ಮಹತ್=ವಿಸ್ತೀರ್ಣವಾದ ಆಯತನಂ=ರಾಜ್ಯವನ್ನೂ ವೃಣೀಷ್ವ=ಬೇಡಿಕೊ; ಚ=ಮತ್ತು ಸ್ವಯಂ=ನೀನು ಯಾವತ್=ಎಷ್ಟು ಶರದಃ=ವರ್ಷಗಳು [ಜೀವಿತುಂ=ಬದುಕಲು] ಇಚ್ಛಸಿ=ಇಚ್ಛಿಸುತ್ತೀಯೊ [ತಾವತ್=ಅಷ್ಟು ಕಾಲ] ಜೀವ=ಬದುಕು.

೨೩. (ಯಮ): ಶತಾಯುಗಳಾದ ಪುತ್ರಪೌತ್ರರನ್ನು ಬೇಡಿಕೊ; ಬಹುಪಶುಗಳನ್ನೂ, ಆನೆಕುದುರೆಗಳನ್ನೂ, ಚಿನ್ನವನ್ನೂ, ಭೂಮಿಯ ವಿಸ್ತೀರ್ಣವಾದ ರಾಜ್ಯವನ್ನೂ ಬೇಡಿಕೊ. ನೀನು ಎಷ್ಟು ವರ್ಷಗಳು ಬದುಕಲಿಚ್ಛಿಸುವೆಯೊ (ಅಷ್ಟು ಕಾಲ) ಬದುಕು.

**ಏತತ್ತುಲ್ಯಂ ಯದಿ ಮನ್ಯಸೇ ವರಂ**
**　　　ವೃಣೀಷ್ವ ವಿತ್ತಂ ಚಿರಜೀವಿಕಾಂ ಚ ।**
**ಮಹಾಭೂಮೌ ನಚಿಕೇತಸ್ತ್ವಮೇಧಿ**
**　　　ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥ ೨೪ ॥**

ಏತತ್ತುಲ್ಯಂ=ಇದಕ್ಕೆ ಸಮಾನವಾದ ವರಂ=ವರವನ್ನು ಮನ್ಯಸೇ ಯದಿ=ಎಣಿಸುವೆಯಾದರೆ ವೃಣೀಷ್ವ=ಬೇಡಿಕೊ; ವಿತ್ತಂ=ಧನವನ್ನೂ ಚಿರಜೀವಿಕಾಂ ಚ=ದೀರ್ಘಾಯುಸ್ಸನ್ನೂ [ವೃಣೀಷ್ವ=ಬೇಡಿಕೊ]. ನಚಿಕೇತಃ=ಹೇ ನಚಿಕೇತನೆ, ತ್ವಂ=ನೀನು ಮಹಾಭೂಮೌ=ಮಹಾಭೂಮಿಯಲ್ಲಿ ಏಧಿ=(ರಾಜ)ನಾಗಿರು. ತ್ವಾ=ನಿನ್ನನ್ನು ಕಾಮಾನಾಂ=ಕಾಮಗಳಲ್ಲಿ ಕಾಮಭಾಜಂ=ಭೋಗಿಯಾಗಿ ಕರೋಮಿ=ಮಾಡುತ್ತೇನೆ.

೨೪. ಇದಕ್ಕೆ ಸಮಾನವಾದ ವರವು (ಬೇರೆ ಇದೆಯೆಂದು) ಎಣಿಸುವೆಯಾದರೆ (ಅದನ್ನು) ಬೇಡಿಕೊ. ಧನವನ್ನೂ ದೀರ್ಘಾಯುಸ್ಸನ್ನೂ ಬೇಡಿಕೊ. ಹೇ ನಚಿಕೇತ, ಮಹಾಭೂಮಿಯಲ್ಲಿ ನೀನು (ರಾಜ)ನಾಗಿರು. (ಎಲ್ಲ) ಕಾಮಗಳಲ್ಲಿಯೂ ನಿನ್ನನ್ನು ಭೋಗಿಯನ್ನಾಗಿ ಮಾಡುತ್ತೇನೆ.

**ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ**
**　　　ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ ।**
**ಇಮಾ ರಾಮಾಃ ಸರಥಾಃ ಸತೂರ್ಯಾ**
**　　　ನ ಹೀದೃಶಾ ಲಂಭನೀಯಾ ಮನುಷ್ಯೈಃ ।**

**ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ**
**ನಚಿಕೇತೋ ಮರಣಂ ಮಾನುಪ್ರಾಕ್ಷೀಃ ॥ ೨೫ ॥**

**ಮರ್ತ್ಯಲೋಕೇ**=ಮರ್ತ್ಯಲೋಕದಲ್ಲಿ **ಯೇ ಯೇ**=ಯಾವಯಾವ **ಕಾಮಾಃ**=ಕಾಮಗಳು **ದುರ್ಲಭಾಃ**=ದುರ್ಲಭವೊ [**ತಾನ್**=ಆ] **ಸರ್ವಾನ್**=ಎಲ್ಲ **ಕಾಮಾನ್** = ಕಾಮುಗಳನ್ನು **ಛಂದತಃ** = ಇಚ್ಛಾನುಸಾರ **ಪ್ರಾರ್ಥಯಸ್ವ** = ಬೇಡಿಕೊ. **ಇಮಾಃ** = ಈ **ರಾಮಾಃ** = ಅಪ್ಸರಸ್ತ್ರೀಯರು **ಸರಥಾಃ** = ರಥಗಳಿಂದ ಕೂಡಿರುವರು **ಸತೂರ್ಯಾಃ** = ವಾದ್ಯಗಳಿಂದ ಕೂಡಿರುವರು; **ಈದೃಶಾಃ** = ಇಂತಹವರು **ಮನುಷ್ಯೈಃ** = ಮನುಷ್ಯರಿಂದ **ನ ಹಿ ಲಂಭನೀಯಾಃ** = ಹೊಂದಲ್ಪಡತಕ್ಕವರಲ್ಲ; **ಮತ್ಪ್ರತ್ತಾಭಿಃ ಆಭಿಃ**=ನನ್ನಿಂದ ಕೊಡಲ್ಪಟ್ಟ ಇವರಿಂದ **ಪರಿಚಾರಯಸ್ವ**=ಸೇವೆಮಾಡಿಸಿಕೊ. **ನಚಿಕೇತಃ**=ಹೇ ನಚಿಕೇತನೆ, **ಮರಣಂ**=ಮರಣವನ್ನು ಕುರಿತು **ಮಾ ಅನುಪ್ರಾಕ್ಷೀಃ** = ಪ್ರಶ್ನಿಸಬೇಡ.

**೨೫.** ಮರ್ತ್ಯಲೋಕದಲ್ಲಿ ಯಾವ ಯಾವ ಕಾಮಗಳು ದುರ್ಲಭವೊ ಆ ಕಾಮುಗಳೆಲ್ಲವನ್ನೂ ಇಚ್ಛಾನುಸಾರ ಬೇಡಿಕೊ. ಈ ಅಪ್ಸರಸ್ತ್ರೀಯರು ರಥಗಳಿಂದಲೂ ವಾದ್ಯಗಳಿಂದಲೂ ಕೂಡಿರುತ್ತಾರೆ. ಇಂತಹವರು ಮನುಷ್ಯರಿಗೆ ಲಭ್ಯರಲ್ಲ. ನಾನು ಕೊಡುವ ಇವರಿಂದ ಸೇವೆಮಾಡಿಸಿಕೊ. ಹೇ ನಚಿಕೇತ, ಮರಣವನ್ನು[೧] ಕುರಿತು ಪ್ರಶ್ನಿಸಬೇಡ.

[[೧] ಸತ್ತ ಮೇಲೆ ಇರುತ್ತಾನೆಯೊ ಇಲ್ಲವೊ ಎಂಬ ಪ್ರಶ್ನೆ.]

**ಶ್ವೋಭಾವಾ ಮರ್ತ್ಯಸ್ಯ ಯದಂತಕೈತತ್**
**ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।**
**ಅಪಿ ಸರ್ವಂ ಜೀವಿತಮಲ್ಪಮೇವ**
**ತವೈವ ವಾಹಾಸ್ತವ ನೃತ್ಯಗೀತೇ ॥ ೨೬ ॥**

**ಅಂತಕ** = ಹೇ ಅಂತಕನೆ [**ಭೋಗಾಃ**=ಭೋಗಗಳು] **ಶ್ವೋಭಾವಾಃ**=ಕ್ಷಣಿಕವಾದುವುಗಳು; **ಮರ್ತ್ಯಸ್ಯ**=ಮನುಷ್ಯನ **ಸರ್ವೇಂದ್ರಿಯಾಣಾಂ**=ಎಲ್ಲ ಇಂದ್ರಿಯುಗಳ **ಯತ್ ಏತತ್ ತೇಜಃ**=ಯಾವ ಈ ತೇಜಸ್ಸನ್ನು **ಜರಯಂತಿ**=ಕ್ಷೀಣಗೊಳಿಸುವುವು. **ಸರ್ವಂ ಅಪಿ ಜೀವಿತಂ** = ಎಲ್ಲ ಆಯುಸ್ಸೂ **ಅಲ್ಪಂ ಏವ** = ಅಲ್ಪವೇ; **ವಾಹಾಃ** = ವಾಹನಗಳು **ತವ ಏವ** = ನಿನಗೇ [ಇರಲಿ], **ನೃತ್ಯಗೀತೇ** = ನೃತ್ಯಗೀತೆಗಳು **ತವ** = ನಿನಗೇ [ಇರಲಿ].

**೨೬.** (ನಚಿಕೇತ): ಹೇ ಅಂತಕ, (ಈ ಭೋಗಗಳು) ಕ್ಷಣಿಕವಾದುವುಗಳು[೧] ಮತ್ತು ಮನುಷ್ಯನ ಸರ್ವೇಂದ್ರಿಯಗಳ ತೇಜಸ್ಸನ್ನು ಕ್ಷೀಣ

ಗೊಳಿಸುವುವು.[೨] ಎಲ್ಲ ಆಯುಸ್ಸೂ[೩] ಅಲ್ಪವೇ. ಈ ವಾಹನಗಳೂ ನೃತ್ಯ ಗೀತೆಗಳೂ ನಿನಗೇ ಇರಲಿ.

[ಹೀಗೆ ಯಮನು ಲೋಭವನ್ನು ತೋರಿಸಿದರೂ ನಚಿಕೇತನು ದೊಡ್ಡ ಸರೋವರ ದಂತೆ ಕ್ಷೋಭೆಯನ್ನು ಹೊಂದದೆ ಹೇಳುತ್ತಾನೆ.

[೧] ನಾಳೆಯ ವರೆಗೆ ಇರುವುವೊ ಇಲ್ಲವೊ ಎಂಬ ಅನಿಶ್ಚಿತವಾದ ಇರುವಿಕೆಯುಳ್ಳವು ಗಳಿಗೆ 'ಶ್ವೋಭಾವಾಃ' ಎಂದು ಹೆಸರು.

[೨] ಧರ್ಮ ವೀರ್ಯ ಪ್ರಜ್ಞೆ ತೇಜಸ್ಸು ಯಶಸ್ಸು ಮೊದಲಾದುವುಗಳನ್ನು ನಾಶ ಗೊಳಿಸುವುವು.

[೩] ಬ್ರಹ್ಮನ ಆಯುಸ್ಸೂ ಕೂಡ.]

**ನ ವಿತ್ತೇನ ತರ್ಪಣೀಯೋ ಮನುಷ್ಯೋ**
**ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ತ್ವಾ ।**
**ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ**
**ವರಸ್ತು ಮೇ ವರಣೀಯಃ ಸ ಏವ ॥ ೨೭ ॥**

ಮನುಷ್ಯಃ = ಮನುಷ್ಯನು ವಿತ್ತೇನ = ಧನದಿಂದ ನ ತರ್ಪಣೀಯಃ = ತೃಪ್ತಿ ಪಡತಕ್ಕವನಲ್ಲ. ತ್ವಾ = ನಿನ್ನನ್ನು ಅದ್ರಾಕ್ಷ್ಮ ಚೇತ್ = ನೋಡಿದೆವಾದರೆ ವಿತ್ತಂ = ಧನವನ್ನು ಲಪ್ಸ್ಯಾಮಹೇ = ಹೊಂದುತ್ತೇವೆ. ತ್ವಂ = ನೀನು ಯಾವತ್ = ಎಲ್ಲಿಯ ವರೆಗೆ ಈಶಿಷ್ಯಸಿ = ಆಳುತ್ತೀಯೊ [ತಾವತ್ = ಅಲ್ಲಿಯ ವರೆಗೆ] ಜೀವಿಷ್ಯಾಮಃ = ಬದುಕುವೆವು. ತು = ಆದರೆ ಸಃ = ಆ ವರಃ ಏವ = ವರವೇ ಮೇ = ನನಗೆ ವರ-ಣೀಯಃ = ಪ್ರಾರ್ಥನೀಯವು.

೨೭. ಮನುಷ್ಯನು ಧನದಿಂದ ತೃಪ್ತಿಪಡತಕ್ಕವನಲ್ಲ. ನಿನ್ನನ್ನು ನೋಡಿದೆವಾದರೆ ಧನವನ್ನು ಹೊಂದುತ್ತೇವೆ. ನೀನು (ಯಾಮ್ಯಪದವಿಯಲ್ಲಿ) ಆಳುವ ವರೆಗೂ ಬದುಕುವೆವು. ಆದರೆ ನನಗೆ ಆ ವರವೇ ಬೇಕು.

**ಅಜೀರ್ಯತಾಮಮೃತಾನಾಮುಪೇತ್ಯ**
**ಜೀರ್ಯನ್ ಮರ್ತ್ಯಃ ಕ್ವಧಃಸ್ಥಃ ಪ್ರಜಾನನ್ ।**
**ಅಭಿಧ್ಯಾಯನ್ ವರ್ಣರತಿಪ್ರಮೋದಾನ್**
**ಅತಿದೀರ್ಘೇ ಜೀವಿತೇ ಕೋ ರಮೇತ ॥ ೨೮ ॥**

ಅಜೀರ್ಯತಾಂ = ಮುಪ್ಪಿಲ್ಲದ ಅಮೃತಾನಾಂ = ಅಮರರನ್ನು ಉಪೇತ್ಯ = ಹೊಂದಿ ಪ್ರಜಾನನ್ = ತಿಳಿದವನಾಗಿ ಕ್ವಧಃಸ್ಥಃ = ಕೆಳಗಿರುವವನಾದ ಜೀರ್ಯನ್ =

ಮುಪ್ಪುಳ್ಳವನಾದ **ಕಃ ಮರ್ತ್ಯಃ**=ಯಾವ ಮರ್ತ್ಯನು **ವರ್ಣರತಿಪ್ರಮೋದಾನ್**=ವರ್ಣರತಿಪ್ರಮೋದಗಳನ್ನು **ಅಭಿಧ್ಯಾಯನ್**=ಆಲೋಚಿಸುವವನಾಗಿ **ಅತಿದೀರ್ಘೇ**=ಅತಿದೀರ್ಘವಾದ **ಜೀವಿತೇ**=ಜೀವಿತದಲ್ಲಿ **ರಮೇತ**=ರಮಿಸುವನು?

**೨೮.** ಮುಪ್ಪಿಲ್ಲದ ಅಮರರನ್ನು ಹೊಂದಿ,[೧] ತಿಳಿದುಕೊಂಡು,[೨] ಕೆಳಗಿರುವವನೂ[೩] ಮುಪ್ಪುಳ್ಳವನೂ ಆದ ಯಾವ ಮರ್ತ್ಯನು ವರ್ಣರತಿ ಪ್ರಮೋದಗಳನ್ನು[೪] ಆಲೋಚಿಸುವವನಾಗಿ[೫] ಅತಿದೀರ್ಘವಾದ ಜೀವಿತದಲ್ಲಿ ರಮಿಸುವನು?

[[೧] ದೇವತೆಗಳ ಸಮೀಪವನ್ನು ಹೊಂದಿ.

[೨] ತನಗೆ ಉತ್ಕೃಷ್ಟವಾದ ಮತ್ತೊಂದು ಪ್ರಯೋಜನವು ಇದೆಯೆಂದು ದೇವತೆಗಳಿಂದ ತಿಳಿದುಕೊಂಡು.

[೩] 'ಕುಃ' ಎಂದರೆ ಭೂಮಿ; ಅಂತರಿಕ್ಷಾದಿಲೋಕಗಳ ಅಪೇಕ್ಷೆಯಿಂದ 'ಅಧಃ' ಎಂದರೆ ಕೆಳಗೆ ಇರುತ್ತದೆ. ಅದರಲ್ಲಿ ಇರುವವನಿಗೆ 'ಕ್ವಧಃಸ್ಥಃ' ಎಂದು ಹೆಸರು.

[೪] ವರ್ಣ=ಗೀತ, ರತಿ=ಕ್ರೀಡೆ, ಪ್ರಮೋದ=ಇವುಗಳಿಂದಾಗುವ ಸುಖ.

[೫] ಇವುಗಳಿಗೆ ಒಂದು ವ್ಯವಸ್ಥಿತವಾದ ರೂಪವಿಲ್ಲವೆಂದು ಆಲೋಚಿಸುವವನಾಗಿ.]

**ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ**
**ಯತ್ ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ ।**
**ಯೋಽಯಂ ವರೋ ಗೂಢಮನುಪ್ರವಿಷ್ಟೋ**
**ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ ॥ ೨೯ ॥**

**ಮೃತ್ಯೋ**=ಹೇ ಮೃತ್ಯು, **ಯಸ್ಮಿನ್**=ಯಾವುದರಲ್ಲಿ **ಇದಂ**=ಈ **ವಿಚಿಕಿತ್ಸಂತಿ**=ಸಂಶಯವನ್ನು ಹೊಂದುತ್ತಾರೆಯೊ, **ಯತ್**=ಯಾವುದು **ಸಾಂಪರಾಯೇ**=ಪರಲೋಕವಿಷಯದಲ್ಲಿ **ಮಹತಿ**=ಮಹಾಪ್ರಯೋಜನಕ್ಕೆ ಸಾಧನವೊ **ತತ್**=ಅದನ್ನು **ನಃ**=ನಮಗೆ **ಬ್ರೂಹಿ**=ಹೇಳು. **ಯಃ**=ಯಾವ **ಅಯಂ**=ಈ **ವರಃ**=ವರವು **ಗೂಢಂ**=ಗಹನವಾಗಿ **ಅನುಪ್ರವಿಷ್ಟಃ**=ಒಳಗೆ ಪ್ರವೇಶಿಸಿರುವುದೊ **ತಸ್ಮಾತ್**=ಅದಕ್ಕಿಂತ **ಅನ್ಯಂ**=ಬೇರೆ [ವರಂ=ವರವನ್ನು] **ನಚಿಕೇತಾಃ**=ನಚಿಕೇತನು **ನ ವೃಣೀತೇ**=ಪ್ರಾರ್ಥಿಸುವುದಿಲ್ಲ.

**೨೯.** ಹೇ ಮೃತ್ಯು, ಯಾವ ವಿಷಯದಲ್ಲಿ[೧] ಈ ಸಂಶಯವನ್ನು ಹೊಂದುತ್ತಾರೆಯೊ, ಯಾವುದು[೨] ಪರಲೋಕವಿಷಯದ ಮಹಾಪ್ರಯೋ

ಜನಕ್ಕೆ ಸಾಧನವೊ ಅದನ್ನು ನಮಗೆ ಹೇಳು. ಯಾವ ಈ ವರವು ಗಹನವಾಗಿ ಒಳಗೆ ಪ್ರವೇಶಿಸಿರುವುದೊ ಅದಕ್ಕಿಂತ ಬೇರೆ[೩] (ವರವನ್ನು) ನಚಿಕೇತನು ಪ್ರಾರ್ಥಿಸುವುದಿಲ್ಲ.[೪]

[[೧] ಮೃತನಾದ ಮನುಷ್ಯನ ವಿಷಯದಲ್ಲಿ 'ಇದ್ದಾನೆಯೊ, ಇಲ್ಲವೊ' ಎಂಬ ಸಂದೇಹ.
[೨] ಆತ್ಮನಿರ್ಣಯಜ್ಞಾನ.
[೩] ಅವಿವೇಕಿಗಳು ಪ್ರಾರ್ಥಿಸುವ ಅನಿತ್ಯವಿಷಯವಾದ ವರವನ್ನು.
[೪] ಇದು ಶ್ರುತಿಯ ವಚನವೆಂದು ಭಾಷ್ಯಕಾರರು ಹೇಳಿರುತ್ತಾರೆ.]

## ಎರಡನೆಯ ವಲ್ಲೀ

ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯ-
ಸ್ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।
ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ
ಹೀಯತೇಽರ್ಥಾದ್ಯ ಉ ಪ್ರೇಯೋ ವೃಣೀತೇ ॥ ೧ ॥

**ಶ್ರೇಯಃ** = ಶ್ರೇಯಸ್ಸು **ಅನ್ಯತ್** = ಬೇರೆ, **ಉತ** = ಮತ್ತು **ಪ್ರೇಯಃ** = ಪ್ರೇಯಸ್ಸು **ಅನ್ಯತ್ ಏವ** = ಬೇರೆಯೇ. **ತೇ ಉಭೇ** = ಅವೆರಡೂ **ನಾನಾರ್ಥೇ** = ಭಿನ್ನಪ್ರಯೋಜನವುಳ್ಳವುಗಳಾಗಿ **ಪುರುಷಂ**=ಪುರುಷನನ್ನು **ಸಿನೀತಃ**=ಬಂಧಿಸುವುವು. **ತಯೋಃ** = ಅವೆರಡರಲ್ಲಿ **ಶ್ರೇಯಃ** = ಶ್ರೇಯಸ್ಸನ್ನು **ಆದದಾನಸ್ಯ** = ತೆಗೆದುಕೊಳ್ಳುವವನಿಗೆ **ಸಾಧು ಭವತಿ** = ಒಳ್ಳೆಯದಾಗುವುದು; **ಉ** = ಮತ್ತು **ಯಃ** = ಯಾವನು **ಪ್ರೇಯಃ** = ಪ್ರೇಯಸ್ಸನ್ನು **ವೃಣೀತೇ** = ಆರಿಸಿಕೊಳ್ಳುವನೊ [**ಸಃ** = ಅವನು] **ಅರ್ಥಾತ್** = ಪುರುಷಾರ್ಥದಿಂದ **ಹೀಯತೇ** = ಚ್ಯುತನಾಗುವನು.

೧. (ಯಮ): ಶ್ರೇಯಸ್ಸು[1] ಬೇರೆ ಮತ್ತು ಪ್ರೇಯಸ್ಸು[2] ಬೇರೆಯೇ. ಅವೆರಡೂ ಭಿನ್ನಪ್ರಯೋಜನವುಳ್ಳವುಗಳಾಗಿ ಪುರುಷನನ್ನು[3] ಬಂಧಿಸುವುವು.[4] ಅವೆರಡರಲ್ಲಿ ಶ್ರೇಯಸ್ಸನ್ನು ತೆಗೆದುಕೊಳ್ಳುವವನಿಗೆ ಒಳ್ಳೆಯದಾಗುವುದು; ಯಾವನು ಪ್ರೇಯಸ್ಸನ್ನು ಆರಿಸಿಕೊಳ್ಳುವನೊ (ಅವನು) ಪುರುಷಾರ್ಥದಿಂದ[5] ಚ್ಯುತನಾಗುವನು.

[[1] ಶ್ರೇಯಸ್ಸು ಎಂದರೆ ನಿಃಶ್ರೇಯಸ್ಸು, ಮೋಕ್ಷಕ್ಕೆ ಕಾರಣವಾದ ಜ್ಞಾನ.

[2] ಅವಿದ್ಯಾರೂಪವಾದ ಪ್ರೇಯಸ್ಸು ಸ್ವರ್ಗಾದಿ ಅನಿತ್ಯಫಲಗಳಿಗೆ ಕಾರಣವಾಗಿರುತ್ತದೆ.

[3] ವರ್ಣಾಶ್ರಮಗಳಿಂದ ಕೂಡಿ ಅಧಿಕಾರಿಯಾಗಿರುವವನನ್ನು.

[4] ಯಾರಿಗೆ ಮುಕ್ತಿ ಬೇಕಾಗಿದೆಯೊ ಅವರು ಶ್ರೇಯಸ್ಸಿನಿಂದ ಪ್ರೇರಿತರಾಗುತ್ತಾರೆ. ಯಾರಿಗೆ ಅಭ್ಯುದಯ ಬೇಕಾಗಿದೆಯೊ ಅವರು ಪ್ರೇಯಸ್ಸಿನಿಂದ ಪ್ರೇರಿತರಾಗುತ್ತಾರೆ. ಈ ದೃಷ್ಟಿಯಿಂದ ಪ್ರತಿಯೊಬ್ಬ ಮನುಷ್ಯನು ಬಂಧಿತನಾಗುತ್ತಾನೆ.

[5] ನಿತ್ಯಪ್ರಯೋಜನದಿಂದ.]

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ-
ಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।
ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ
ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ ॥ ೨ ॥

**ಶ್ರೇಯಃ ಚ**=ಶ್ರೇಯಸ್ಸು **ಪ್ರೇಯಃ ಚ**=ಪ್ರೇಯಸ್ಸು **ಮನುಷ್ಯಂ**=ಮನುಷ್ಯನನ್ನು **ಏತಃ**=ಬಂದು ಸೇರುತ್ತವೆ. **ಧೀರಃ**=ಧೀಮಂತನು **ತೌ**=ಅವುಗಳನ್ನು **ಸಂಪರೀತ್ಯ**=ಚೆನ್ನಾಗಿ ಪರಿಶೀಲಿಸಿ **ವಿವಿನಕ್ತಿ**=ವಿವೇಚಿಸುತ್ತಾನೆ. **ಧೀರಃ**=ಧೀಮಂತನು **ಪ್ರೇಯಸಃ**=ಪ್ರೇಯಸ್ಸಿಗಿಂತ **ಶ್ರೇಯಃ ಹಿ**=ಶ್ರೇಯಸ್ಸನ್ನು **ಅಭಿವೃಣೀತೇ**=ಆರಿಸಿಕೊಳ್ಳುತ್ತಾನೆ. **ಮಂದಃ**=ಅವಿವೇಕಿಯು **ಯೋಗಕ್ಷೇಮಾತ್**=ಯೋಗಕ್ಷೇಮಕ್ಕಾಗಿ **ಪ್ರೇಯಃ**=ಪ್ರೇಯಸ್ಸನ್ನು **ವೃಣೀತೇ**=ಆರಿಸಿಕೊಳ್ಳುತ್ತಾನೆ.

೨. ಶ್ರೇಯಸ್ಸು ಮತ್ತು ಪ್ರೇಯಸ್ಸು ಮನುಷ್ಯನ ಸಮೀಪಕ್ಕೆ ಬರುತ್ತವೆ. ಧೀಮಂತನು ಅವುಗಳನ್ನು ಚೆನ್ನಾಗಿ ಪರಿಶೀಲಿಸಿ ವಿವೇಚಿಸುತ್ತಾನೆ. ಧೀಮಂತನು ಪ್ರೇಯಸ್ಸಿಗಿಂತ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಅವಿವೇಕಿಯು ಯೋಗಕ್ಷೇಮಕ್ಕಾಗಿ ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

[ಶ್ರೇಯಸ್ಸು ಪ್ರೇಯಸ್ಸು ಇವೆರಡೂ ಮನುಷ್ಯನ ಅಧೀನದಲ್ಲಿದ್ದರೆ ಜನರು ಹೆಚ್ಚಾಗಿ ಪ್ರೇಯಸ್ಸನ್ನೇ ಏಕೆ ಆರಿಸಿಕೊಳ್ಳುತ್ತಾರೆ ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳಿದೆ: ಶ್ರೇಯಸ್ಸು-ಪ್ರೇಯಸ್ಸುಗಳೆರಡೂ ಸಾಧನದೃಷ್ಟಿಯಿಂದಲೂ ಫಲದೃಷ್ಟಿಯಿಂದಲೂ ವಿಂಗಡಿಸಲಾಗದಂತೆ ಬೆರೆತುಕೊಂಡಿರುವ ಹಾಗೆ ಮಂದಬುದ್ಧಿಗಳಿಗೆ ಕಂಡುಬರುತ್ತವೆ. ವಿವೇಕಸಾಮರ್ಥ್ಯದಿಂದ ಧೀರನು ಪ್ರೇಯಸ್ಸಿಗಿಂತ ಶ್ರೇಷ್ಠವಾದ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಆದರೆ ಮಂದಬುದ್ಧಿಯುಳ್ಳವನಿಗೆ ಈ ವಿವೇಕಸಾಮರ್ಥ್ಯವಿಲ್ಲದಿರುವುದರಿಂದ ಪಶುಪುತ್ರಾದಿರೂಪವುಳ್ಳ ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.]

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್
ಅಭಿಧ್ಯಾಯನ್ ನಚಿಕೇತೋಽತ್ಯಸ್ರಾಕ್ಷೀಃ ।
ನೈತಾಂ ಸೃಂಕಾಂ ವಿತ್ತಮಯೀಮವಾಪ್ತೋ
ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾಃ ॥ ೩ ॥

**ನಚಿಕೇತಃ**=ಹೇ ನಚಿಕೇತನೆ, **ಸಃ ತ್ವಂ**=ಆ ನೀನು **ಪ್ರಿಯಾನ್**=ಪ್ರಿಯವಾದ **ಪ್ರಿಯರೂಪಾನ್ ಚ**=ಮತ್ತು ಪ್ರಿಯರೂಪವಾದ **ಕಾಮಾನ್**=ಕಾಮಗಳನ್ನು **ಅಭಿಧ್ಯಾಯನ್**=ವಿವೇಚಿಸುವವನಾಗಿ **ಅತ್ಯಸ್ರಾಕ್ಷೀಃ**=ತ್ಯಾಗಮಾಡಿರುತ್ತೀಯೆ. **ಯಸ್ಯಾಂ**=ಯಾವುದರಲ್ಲಿ **ಬಹವಃ**=ಬಹು **ಮನುಷ್ಯಾಃ**=ಮನುಷ್ಯರು **ಮಜ್ಜಂತಿ**=

ಮುಳುಗುತ್ತಾರೆಯೊ ಏತಾಂ=[ಅಂತಹ] ಈ ವಿತ್ತಮಯೀಂ=ವಿತ್ತಮಯವಾದ ಸೃಂಕಾಂ=ಮಾರ್ಗವನ್ನು ನ ಅವಾಪ್ತಃ=ಹೊಂದಲಿಲ್ಲ.

೩. ಹೇ ನಚಿಕೇತ, ಆ ನೀನು ಪ್ರಿಯವಾದ ಮತ್ತು ಪ್ರಿಯರೂಪವಾದ ಕಾಮಗಳನ್ನು ವಿವೇಚಿಸಿ ತ್ಯಾಗಮಾಡಿರುತ್ತೀಯೆ; ಯಾವುದರಲ್ಲಿ ಬಹು ಮನುಷ್ಯರು ಮುಳುಗುತ್ತಾರೆಯೊ ಅಂಥ ವಿತ್ತಮಯವಾದ ಈ ಮಾರ್ಗವನ್ನು ನೀನು ಹೊಂದಲಿಲ್ಲ.

**ದೂರಮೇತೇ ವಿಪರೀತೇ ವಿಷೂಚೀ**
**ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ ।**
**ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ**
**ನ ತ್ವಾ ಕಾಮಾ ಬಹವೋಽಲೋಲುಪಂತ ॥ ೪ ॥**

**ಯಾ ಚ ಅವಿದ್ಯಾ ವಿದ್ಯಾ ಇತಿ**=ಯಾವುದು ಅವಿದ್ಯೆಯೆಂದೂ ವಿದ್ಯೆಯೆಂದೂ **ಜ್ಞಾತಾ**=ತಿಳಿಯಲ್ಪಟ್ಟಿದೆಯೊ **ಏತೇ**=ಇವೆರಡೂ **ದೂರಂ**=ದೂರವಾಗಿ **ವಿಪರೀತೇ**=ಭಿನ್ನವಾಗಿರುವುವು, **ವಿಷೂಚೀ**=ಭಿನ್ನಗತಿಗಳುಳ್ಳವು. **ನಚಿಕೇತಸಂ**=ನಚಿಕೇತನನ್ನು **ವಿದ್ಯಾಭೀಪ್ಸಿನಂ**=ವಿದ್ಯಾರ್ಥಿಯೆಂದು **ಮನ್ಯೇ**=ಎಣಿಸುತ್ತೇನೆ. **ತ್ವಾ**=ನಿನ್ನನ್ನು **ಬಹವಃ**=ಬಹು **ಕಾಮಾಃ**=ಕಾಮಗಳು **ನ ಅಲೋಲುಪಂತ**=ಸೆಳೆಯಲಿಲ್ಲ.

೪. ಯಾವುದು ವಿದ್ಯೆಯೆಂದೂ[೧] ಅವಿದ್ಯೆಯೆಂದೂ[೨] ತಿಳಿಯಲ್ಪಟ್ಟಿದೆಯೊ ಇವೆರಡೂ ದೂರವಾಗಿ ಭಿನ್ನವಾಗಿರುವುವು[೩] ಭಿನ್ನಗತಿಗಳುಳ್ಳವು.[೪] ನಚಿಕೇತನನ್ನು ವಿದ್ಯಾರ್ಥಿಯೆಂದು ಎಣಿಸುತ್ತೇನೆ. ನಿನ್ನನ್ನು ಬಹು ಕಾಮಗಳು[೫] ಸೆಳೆಯಲಿಲ್ಲ.

[[೧] ಶ್ರೇಯೋವಿಷಯವಾದದ್ದು.
[೨] ಪ್ರೇಯೋವಿಷಯವಾದದ್ದು.
[೩] ವಿವೇಕರೂಪವಾಗಿಯೂ ಅವಿವೇಕರೂಪವಾಗಿಯೂ ಇರುವುದರಿಂದ.
[೪] ಸಂಸಾರಮೋಕ್ಷಗಳಿಗೆ ಕಾರಣವಾಗಿರುವುದರಿಂದ ಭಿನ್ನಫಲಗಳನ್ನು ಕೊಡುತ್ತವೆ.
[೫] ಮೂಢರ ಬುದ್ಧಿಯನ್ನು ಸೆಳೆಯುವ ವಿಷಯವಸ್ತುಗಳು ಶ್ರೇಯೋಮಾರ್ಗದಿಂದ ತಪ್ಪಿಸಲಿಲ್ಲ.]

**ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ ।**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾ**
**ಅಂಧೇನೈವ ನೀಯಮಾನಾ ಯಥಾಂಧಾಃ ॥ ೫ ॥**

**ಅವಿದ್ಯಾಯಾಂ**=ಅವಿದ್ಯೆಯ **ಅಂತರೇ**=ಮಧ್ಯದಲ್ಲಿ **ವರ್ತಮಾನಾಃ**=ಇರುವವರಾಗಿ **ಸ್ವಯಂ**=ತಾವೇ **ಧೀರಾಃ**=ಧೀರರು **ಪಂಡಿತಂಮನ್ಯಮಾನಾಃ**=ಪಂಡಿತರು ಎಂದು ತಿಳಿದುಕೊಳ್ಳುವವರಾಗಿ **ದಂದ್ರಮ್ಯಮಾಣಾಃ**=ವಕ್ರಗತಿಯಲ್ಲಿ ನಡೆಯುವವರಾಗಿ **ಮೂಢಾಃ**=ಮೂಢರು **ಯಥಾ**=ಹೇಗೆ **ಅಂಧೇನ ಏವ**=ಕುರುಡನಿಂದ **ನೀಯಮಾನಾಃ**=ಕರೆದುಕೊಂಡು ಹೋಗಲ್ಪಡುತ್ತಿರುವ **ಅಂಧಾಃ**=ಕುರುಡರು [**ಅನರ್ಥಂ ಋಚ್ಛಂತಿ**=ಅನರ್ಥವನ್ನು ಹೊಂದುವರೊ **ತದ್ವತ್**=ಹಾಗೆ] **ಪರಿಯಂತಿ**=ಸುತ್ತುತ್ತಿರುವರು.

**೫.** ಅವಿದ್ಯೆಯ ಮಧ್ಯದಲ್ಲಿ ಇರುವವರಾಗಿ[೧] ತಾವೇ ಧೀರರು ಪಂಡಿತರು ಎಂದು ತಿಳಿದುಕೊಂಡು, ವಕ್ರಗತಿಯಲ್ಲಿ ನಡೆಯುತ್ತಾ, ಕುರುಡನು ಕರೆದುಕೊಂಡು ಹೋಗುತ್ತಿರುವ ಕುರುಡರು (ಅನರ್ಥವನ್ನು ಹೊಂದುವಂತೆ) ಮೂಢರು ಸುತ್ತುತ್ತಿರುವರು.[೨]

[[೧] ಪುತ್ರಪಶ್ವಾದಿತೃಷ್ಣಾಪಾಶಗಳಿಂದ ಕಟ್ಟಲ್ಪಟ್ಟು.
[೨] ಜರಾಮರಣರೋಗಾದಿದುಃಖಗಳಿಂದ.]

**ನ ಸಾಂಪರಾಯಃ ಪ್ರತಿಭಾತಿ ಬಾಲಂ**
**ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ।**
**ಅಯಂ ಲೋಕೋ ನಾಸ್ತಿ ಪರ ಇತಿ**
**ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥ ೬ ॥**

**ಪ್ರಮಾದ್ಯಂತಂ**=ಪ್ರಮಾದವನ್ನು ಮಾಡುತ್ತಿರುವ **ವಿತ್ತಮೋಹೇನ**=ವಿತ್ತಮೋಹದಿಂದ **ಮೂಢಂ**=ಮೂಢನಾದ **ಬಾಲಂ ಪ್ರತಿ**=ಬಾಲನಿಗೆ **ಸಾಂಪರಾಯಃ**=ಸಾಂಪರಾಯವು **ನ ಭಾತಿ**=ಕಾಣುವುದಿಲ್ಲ; **ಅಯಂ ಲೋಕಃ** [**ಅಸ್ತಿ**]=ಈ ಲೋಕವು [ಇದೆ] **ಪರಃ ನ ಅಸ್ತಿ**=ಪರಲೋಕವು ಇಲ್ಲ **ಇತಿ**=ಎಂದು **ಮಾನೀ**=ತಿಳಿದುಕೊಳ್ಳುವವನು **ಪುನಃ ಪುನಃ**=ಪುನಃ ಪುನಃ **ಮೇ**=ನನ್ನ **ವಶಂ**=ವಶವನ್ನು **ಆಪದ್ಯತೇ**=ಹೊಂದುತ್ತಾನೆ.

**೬.** ಪ್ರಮಾದವನ್ನು ಮಾಡುತ್ತಿರುವ[೧] ವಿತ್ತಮೋಹದಿಂದ ಮೂಢನಾಗಿರುವ ಬಾಲನಿಗೆ ಸಾಂಪರಾಯವು ಕಾಣುವುದಿಲ್ಲ. 'ಈ ಲೋಕವು[೨] (ಮಾತ್ರ ಇದೆ), ಪರಲೋಕವಿಲ್ಲ' ಎಂದು ತಿಳಿದುಕೊಳ್ಳುವವನು ಪುನಃ ಪುನಃ ನನ್ನ ವಶವನ್ನು ಹೊಂದುತ್ತಾನೆ.

[[೧] ಪುತ್ರಪಶ್ವಾದಿಪ್ರಯೋಜನಗಳಲ್ಲಿ ಆಸಕ್ತವಾದ ಮನಸ್ಸುಳ್ಳವನು.
[೨] ಹೆಂಗಸರು ಅನ್ನಪಾನ ಮೊದಲಾದುವುಗಳಿಂದ ಕೂಡಿರುವ ದೃಶ್ಯಜಗತ್ತು.]

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ**
**ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಽಽ-**
**ಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ ೭ ॥**

**ಯಃ** = ಯಾವ [ಆತ್ಮನು] **ಬಹುಭಿಃ** = ಅನೇಕರಿಂದ **ಶ್ರವಣಾಯ ಅಪಿ** = ಕೇಳುವುದಕ್ಕೂ **ನ ಲಭ್ಯಃ** = ಲಭ್ಯನಲ್ಲವೊ, **ಯಂ**=ಯಾವನನ್ನು **ಶೃಣ್ವಂತಃ ಅಪಿ**= ಕೇಳುತ್ತಿದ್ದರೂ **ಬಹವಃ**=ಅನೇಕರು **ನ ವಿದ್ಯುಃ**=ತಿಳಿಯಲಿಲ್ಲವೊ, **ಅಸ್ಯ**=[ಅಂಥ] ಇವನನ್ನು **ವಕ್ತಾ**=ಹೇಳುವವನು **ಆಶ್ಚರ್ಯಃ** = ಆಶ್ಚರ್ಯನು, **ಲಬ್ಧಾ** = ಪಡೆಯುವವನು **ಕುಶಲಃ**=ಕುಶಲನು, **ಕುಶಲಾನುಶಿಷ್ಟಃ ಜ್ಞಾತಾ**=ಕುಶಲನಿಂದ ಅನುಶಿಷ್ಟನಾಗಿ ತಿಳಿದುಕೊಳ್ಳುವವನು **ಆಶ್ಚರ್ಯಃ** = ಆಶ್ಚರ್ಯನು.

೭. ಈ (ಆತ್ಮನು) ಬಹುಜನರ ಶ್ರವಣಕ್ಕೂ ಲಭ್ಯನಲ್ಲ; ಶ್ರವಣ ಮಾಡಿದ ಮೇಲೂ ಈತನನ್ನು ಬಹುಜನರು ಅರಿಯರು;[೧] ಇವನನ್ನು ಹೇಳುವವನು ಆಶ್ಚರ್ಯನು, ಪಡೆಯುವವನು ಕುಶಲನು, ಕುಶಲನಿಂದ ಅನುಶಿಷ್ಟನಾಗಿ ತಿಳಿದುಕೊಳ್ಳುವವನು ಆಶ್ಚರ್ಯನು.[೨]

[೧ ಮನಸ್ಸಿನ ಸಂಸ್ಕಾರವಿಲ್ಲದುದರಿಂದ.
೨ ಭಗವದ್ಗೀತಾ, ೨, ೨೯.]

**ನ ನರೇಣಾವರೇಣ ಪ್ರೋಕ್ತ ಏಷ**
**ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತ್ಯ-**
**ಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ ೮ ॥**

**ಅವರೇಣ ನರೇಣ**=ಹೀನ ಮನುಷ್ಯನಿಂದ **ಪ್ರೋಕ್ತಃ**=ಹೇಳಲ್ಪಟ್ಟ **ಏಷಃ**=ಈ ಆತ್ಮನು **ನ ಸುವಿಜ್ಞೇಯಃ**=ಚೆನ್ನಾಗಿ ಅರಿತುಕೊಳ್ಳಲು ಆಗುವವನಲ್ಲ; [**ಯಸ್ಮಾತ್**= ಏಕೆಂದರೆ **ಏಷಃ**=ಇವನು **ಅನೇಕೈಃ**=ಅನೇಕರಿಂದ] **ಬಹುಧಾ**=ಬಹುಪ್ರಕಾರವಾಗಿ **ಚಿಂತ್ಯಮಾನಃ [ ಭವತಿ ]** = ಚಿಂತಿಸಲ್ಪಡುತ್ತಾನೆ; **ಅನನ್ಯಪ್ರೋಕ್ತೇ** = ಅನನ್ಯನಾದ ಆಚಾರ್ಯನಿಂದ ಹೇಳಲ್ಪಟ್ಟರೆ **ಅತ್ರ**=ಆತ್ಮವಿಷಯದಲ್ಲಿ **ಗತಿಃ**=ಗತಿಯು **ನ ಅಸ್ತಿ**= ಇರುವುದಿಲ್ಲ. **ಹಿ**=ಏಕೆಂದರೆ **ಅಣುಪ್ರಮಾಣಾತ್** = ಅಣುಪ್ರಮಾಣಕ್ಕಿಂತ **ಅಣೀಯಾನ್** = ಸೂಕ್ಷ್ಮವಾಗಿರುವ [**ಆತ್ಮಾ**= ಆತ್ಮನು] **ಅತರ್ಕ್ಯಂ**= ಅತರ್ಕ್ಯನು.

೮. ಹೀನ ಮನುಷ್ಯನಿಂದ[೧] ಹೇಳಲ್ಪಟ್ಟರೆ ಈ ಆತ್ಮನನ್ನು ಚೆನ್ನಾಗಿ ಅರಿತುಕೊಳ್ಳಲು ಆಗುವುದಿಲ್ಲ; (ಏಕೆಂದರೆ ಅನೇಕರು) ಅನೇಕ ಪ್ರಕಾರ

ವಾಗಿ (ಇವನನ್ನು) ಚಿಂತಿಸುತ್ತಾರೆ[2] ಅನನ್ಯನಾದ[3] ಆಚಾರ್ಯನಿಂದ ಹೇಳಲ್ಪಟ್ಟರೆ ಈ ಆತ್ಮವಿಷಯದಲ್ಲಿ ಗತಿಯಿರುವುದಿಲ್ಲ; ಏಕೆಂದರೆ, ಅಣು ಪ್ರಮಾಣಕ್ಕಿಂತ ಸೂಕ್ಷ್ಮವಾಗಿರುವ (ಆತ್ಮನು) ಅತರ್ಕ್ಯನು.[4]

[[1] ಪ್ರಾಕೃತಬುದ್ಧಿಯುಳ್ಳವನಿಂದ.

[2] ಆತ್ಮನು ಇರುವನು, ಇಲ್ಲ, ಕರ್ತೃ, ಅಕರ್ತೃ, ಶುದ್ಧನು, ಅಶುದ್ಧನು ಎಂದು.

[3] ಭೇದವನ್ನು ನೋಡದವನೂ ಬ್ರಹ್ಮಸ್ವರೂಪವಾಗಿರುವವನೂ ಆದ ಆಚಾರ್ಯ ನಿಂದ ಹೇಳಲ್ಪಟ್ಟರೆ ಆಗ ಆತ್ಮನು ಇರುವನು, ಇಲ್ಲ ಎಂಬ ಚಿಂತೆ ಇರುವುದಿಲ್ಲ; ಇದು ಮೊದಲನೆಯ ಅರ್ಥ. ಎರಡನೆಯ ಅರ್ಥ: ಸ್ವಾತ್ಮಭೂತನೂ ಅನನ್ಯನೂ ಆದ ಆತ್ಮನು ಹೇಳಲ್ಪಟ್ಟರೆ ಆಗ ಮತ್ತೊಂದನ್ನು ಅರಿಯುವ ಗತಿಯು ಇರುವುದಿಲ್ಲ; ಮೂರನೆಯ ಅರ್ಥ: ಅನನ್ಯನಾದ ಆತ್ಮನು ಹೇಳಲ್ಪಟ್ಟರೆ ಸಂಸಾರಗತಿ ಇರುವುದಿಲ್ಲ; ನಾಲ್ಕನೆಯ ಅರ್ಥ: ಬ್ರಹ್ಮಸ್ವರೂಪನಾದ ಆಚಾರ್ಯನಿಂದ ಆತ್ಮನು ಅನನ್ಯನೆಂದು ಹೇಳಲ್ಪಟ್ಟರೆ ಅನವಬೋಧವೆಂಬುದು (ಅಗತಿ) ಇರುವುದಿಲ್ಲ; ಇಲ್ಲಿ 'ಪ್ರೋಕ್ತೇ+ ಅಗತಿಃ' ಎಂದು ಪದಚ್ಛೇದ ಮಾಡಿದೆ.

[4] ಸ್ವಬುದ್ಧಿಯಿಂದ ಆತ್ಮನನ್ನು ಊಹಿಸಲು ಆಗುವುದಿಲ್ಲ.]

**ನೈಷಾ ತರ್ಕೇಣ ಮತಿರಾಪನೇಯಾ**
**　　ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।**
**ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ**
**　　ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ　॥ ೯ ॥**

**ಪ್ರೇಷ್ಠ**= ಪ್ರಿಯತಮನೆ, **ಏಷಾ**= ಈ **ಮತಿಃ**= ಆತ್ಮಜ್ಞಾನವು **ತರ್ಕೇಣ**= ತರ್ಕದಿಂದ **ನ ಆಪನೇಯಾ**= ಪಡೆಯತಕ್ಕದ್ದಲ್ಲ; **ಅನ್ಯೇನ ಏವ**= ಬೇರೆಯವ ನಿಂದಲೇ **ಪ್ರೋಕ್ತಾ [ಸತೀ]**= ಹೇಳಲ್ಪಟ್ಟರೆ **ಸುಜ್ಞಾನಾಯ [ಭವತಿ]**=ಸುಜ್ಞಾನ ವನ್ನುಂಟುಮಾಡುವುದು; **ಯಾಂ**=ಯಾವುದನ್ನು **ತ್ವಂ**= ನೀನು **ಆಪಃ**= ಹೊಂದಿರು ತ್ತೀಯೆ. **ನಚಿಕೇತಃ**=ಹೇ ನಚಿಕೇತನೆ, **ಸತ್ಯಧೃತಿಃ ಬತ ಅಸಿ**=ನೀನು ಸತ್ಯವಾದ ಧೃತಿಯುಳ್ಳವನು. **ತ್ವಾದೃಕ್**= ನಿನ್ನಂಥ **ಪ್ರಷ್ಟಾ**= ಕೇಳುವವನು **ನಃ**= ನಮಗೆ **ಭೂಯಾತ್**= ಉಂಟಾಗಲಿ.

೯. ಈ ಆತ್ಮಜ್ಞಾನವು[1] ತರ್ಕದಿಂದ ಪಡೆಯತಕ್ಕದ್ದಲ್ಲ; ಬೇರೆಯವ ನಿಂದಲೇ[2] ಹೇಳಲ್ಪಟ್ಟರೆ ಸುಜ್ಞಾನವನ್ನುಂಟುಮಾಡುವುದು. ಇದನ್ನು ನೀನು ಹೊಂದಿರುತ್ತೀಯೆ. ಹೇ ನಚಿಕೇತ, ನೀನು ಸತ್ಯವಾದ ಧೃತಿಯುಳ್ಳವನು. ನಿನ್ನಂಥ ಕೇಳತಕ್ಕವನು ನಮಗೆ ಉಂಟಾಗಲಿ.

[೧ ಆಗಮಪ್ರತಿಪಾದ್ಯವಾದ.
೨ ಆಗಮವನ್ನು ಬಲ್ಲ ಆಚಾರ್ಯನಿಂದ.]

**ಜಾನಾಮ್ಯಹಂ ಶೇವಧಿರಿತ್ಯನಿತ್ಯಂ**
**ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ ।**
**ತತೋ ಮಯಾ ನಾಚಿಕೇತಶ್ಚಿತೋಽಗ್ನಿ-**
**ರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ ॥ ೧೦ ॥**

**ಶೇವಧಿಃ** = ಶೇವಧಿಯು **ಅನಿತ್ಯಂ ಹಿ ಇತಿ** = ಅನಿತ್ಯವೆಂದು **ಅಹಂ** = ನಾನು **ಜಾನಾಮಿ**=ತಿಳಿಯುತ್ತೇನೆ, **ಹಿ**=ಏಕೆಂದರೆ **ಅಧ್ರುವೈಃ**=ಅನಿತ್ಯವಸ್ತುಗಳಿಂದ **ತತ್ ಧ್ರುವಂ** = ಆ ನಿತ್ಯವು **ನ ಪ್ರಾಪ್ಯತೇ** = ಪಡೆಯತಕ್ಕದ್ದಲ್ಲ. **ತತಃ** = ಆದುದರಿಂದ **ಮಯಾ** = ನನ್ನಿಂದ **ನಾಚಿಕೇತಃ ಅಗ್ನಿಃ** = ನಾಚಿಕೇತಾಗ್ನಿಯು **ಚಿತಃ** = ಚಯನ ಮಾಡಲ್ಪಟ್ಟಿತು; **ಅನಿತ್ಯೈಃ ದ್ರವ್ಯೈಃ**=ಅನಿತ್ಯವಾದ ದ್ರವ್ಯಗಳಿಂದ **ನಿತ್ಯಂ**=ನಿತ್ಯವನ್ನು **ಪ್ರಾಪ್ತವಾನ್ ಅಸ್ಮಿ**= ಹೊಂದಿರುತ್ತೇನೆ.

**೧೦.** ಶೇವಧಿಯು[೧] ಅನಿತ್ಯವೆಂದು ನಾನು ತಿಳಿದಿರುತ್ತೇನೆ, ಏಕೆಂದರೆ ಅನಿತ್ಯವಸ್ತುಗಳಿಂದ ಆ ನಿತ್ಯವು[೨] ಪಡೆಯತಕ್ಕದ್ದಲ್ಲ. ಆದುದರಿಂದ[೩] ನಾಚಿಕೇತಾಗ್ನಿಯು ನನ್ನಿಂದ ಚಯನಮಾಡಲ್ಪಟ್ಟಿತು. ಅನಿತ್ಯವಾದ ದ್ರವ್ಯಗಳಿಂದ ನಿತ್ಯವನ್ನು[೪] ಪಡೆದುಕೊಂಡಿರುತ್ತೇನೆ.

[೧ ಕರ್ಮಫಲವೆಂಬ ನಿಧಿ.
೨ ಪರಮಾತ್ಮನೆಂಬ ಶೇವಧಿ.
೩ ನಿತ್ಯವು ಅನಿತ್ಯಸಾಧನಗಳಿಂದ ಪಡೆಯತಕ್ಕದ್ದಲ್ಲವೆಂದು ತಿಳಿದೂ.
೪ ಸ್ವರ್ಗವೆಂಬ ಯಾಮ್ಯಸ್ಥಾನ ಎಂದರೆ ಆಪೇಕ್ಷಿಕ ನಿತ್ಯ.]

**ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ**
**ಕ್ರತೋರಾನಂತ್ಯಮಭಯಸ್ಯ ಪಾರಮ್ ।**
**ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ**
**ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥ ೧೧ ॥**

**ನಚಿಕೇತಃ**=ಹೇ ನಚಿಕೇತನೆ, **ಕಾಮಸ್ಯ**=ಕಾಮದ **ಆಪ್ತಿಂ**=ಸಮಾಪ್ತಿಯನ್ನೂ, **ಜಗತಃ** = ಜಗತ್ತಿನ **ಪ್ರತಿಷ್ಠಾಂ** = ಆಶ್ರಯವನ್ನೂ, **ಕ್ರತೋಃ** = ಉಪಾಸನೆಯ **ಆನಂತ್ಯಂ** = ಆನಂತ್ಯವನ್ನೂ, **ಅಭಯಸ್ಯ** = ಅಭಯದ **ಪಾರಂ** = ಪಾರವನ್ನೂ, **ಸ್ತೋಮಂ**=ಸ್ತುತ್ಯವಾಗಿರುವುದನ್ನೂ, **ಮಹತ್** = ಮಹತ್ತಾಗಿರುವುದನ್ನೂ **ಉರು-**

ಗಾಯಂ=ವಿಸ್ತೀರ್ಣಗತಿಯನ್ನೂ, ಪ್ರತಿಷ್ಠಾಂ=ಉತ್ತಮಸ್ಥಿತಿಯನ್ನೂ ದೃಷ್ಟ್ವಾ=ನೋಡಿ ಧೀರಃ=ಧೀರನಾಗಿ ಧೃತ್ಯಾ=ಧೈರ್ಯದಿಂದ ಅತ್ಯಸ್ರಾಕ್ಷೀಃ=ತ್ಯಾಗ ಮಾಡಿರುತ್ತೀಯೆ.

೧೧. ಹೇ ನಚಿಕೇತ, ಕಾಮದ ಸಮಾಪ್ತಿಯನ್ನೂ, ಜಗತ್ತಿನ ಆಶ್ರಯವನ್ನೂ, ಉಪಾಸನೆಯ ಆನಂತ್ಯವನ್ನೂ,[೧] ಅಭಯದ ಪಾರವನ್ನೂ, ಸ್ತುತ್ಯವಾಗಿರುವುದನ್ನೂ, ಮಹತ್ತಾಗಿರುವುದನ್ನೂ,[೨] ವಿಸ್ತೀರ್ಣಗತಿಯುಳ್ಳದ್ದನ್ನೂ, ಉತ್ತಮ ಸ್ಥಿತಿಯನ್ನೂ ನೋಡಿ ಧೀರನಾಗಿ ಧೈರ್ಯದಿಂದ ತ್ಯಾಗ ಮಾಡಿರುತ್ತೀಯೆ.[೩]

[[೧] ಹಿರಣ್ಯಗರ್ಭನ ಸ್ಥಾನ.
[೨] ಅಣಿಮಾದ್ಯೈಶ್ವರ್ಯ ಮೊದಲಾದ ಗುಣಗಳಿಂದ ಕೂಡಿದ್ದು.
[೩] ಪರವನ್ನೇ ಬಯಸಿ ಸಂಸಾರಭೋಗಗಳನ್ನು ತ್ಯಜಿಸಿರುತ್ತೀಯೆ.]

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ**
**ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ ೧೨ ॥**

ತಂ=ಆ ದುರ್ದರ್ಶಂ=ದುರ್ದರ್ಶನಾದ ಗೂಢಂ ಅನುಪ್ರವಿಷ್ಟಂ=ಗೂಢವನ್ನು ಪ್ರವೇಶಿಸಿರುವವನಾದ ಗುಹಾಹಿತಂ=ಗುಹೆಯಲ್ಲಿರುವವನಾದ ಗಹ್ವರೇಷ್ಠಂ=ಗಹ್ವರದಲ್ಲಿರುವವನಾದ ಪುರಾಣಂ=ಪುರಾಣನಾದ ದೇವಂ=ದೇವನನ್ನು ಅಧ್ಯಾತ್ಮಯೋಗಾಧಿಗಮೇನ=ಅಧ್ಯಾತ್ಮಯೋಗಪ್ರಾಪ್ತಿಯಿಂದ ಮತ್ವಾ=ತಿಳಿದುಕೊಂಡು ಧೀರಃ=ಧೀಮಂತನು ಹರ್ಷಶೋಕೌ=ಹರ್ಷಶೋಕಗಳನ್ನು ಜಹಾತಿ=ಬಿಡುತ್ತಾನೆ.

೧೨. ಆ ದುರ್ದರ್ಶನೂ[೧] ಗೂಢವನ್ನು ಪ್ರವೇಶಿಸಿರುವವನೂ[೨] ಗುಹೆಯಲ್ಲಿರುವವನೂ[೩] ಗಹ್ವರದಲ್ಲಿರುವವನೂ[೪] ಪುರಾಣನೂ ಆದ ದೇವನನ್ನು[೫] ಅಧ್ಯಾತ್ಮಯೋಗಪ್ರಾಪ್ತಿಯಿಂದ[೬] ತಿಳಿದುಕೊಂಡು ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ.

[[೧] ಅತಿಸೂಕ್ಷ್ಮನಾಗಿರುವುದರಿಂದ ಅವನನ್ನು ಕಷ್ಟದಿಂದ ನೋಡಲಾಗುವುದು.
[೨] ಪ್ರಾಕೃತವಿಷಯಗಳ ಜ್ಞಾನದಿಂದ ಮುಚ್ಚಿಹೋಗಿರುವವನು.
[೩] ಬುದ್ಧಿಯಲ್ಲಿರುವವನು.
[೪] ಅನರ್ಥಸಂಕುಲವಾದ ಶರೀರದಲ್ಲಿರುವವನು.

೫ ಆತ್ಮನನ್ನು.
೬ ವಿಷಯಗಳಿಂದ ಮನಸ್ಸನ್ನು ಎಳೆದುಕೊಂಡು ಆತ್ಮನಲ್ಲಿಯೇ ನಿಲ್ಲಿಸುವುದಕ್ಕೆ ಅಧ್ಯಾತ್ಮಯೋಗವೆಂದು ಹೆಸರು; ಅದರ ಅಧಿಗಮವೆಂದರೆ ಪ್ರಾಪ್ತಿ.]

**ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ**
**ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ ।**
**ಸ ಮೋದತೇ ಮೋದನೀಯಂ ಹಿ ಲಬ್ಧ್ವಾ**
**ವಿವೃತಂ ಸದ್ಮ ನಚಿಕೇತಸಂ ಮನ್ಯೇ ॥ ೧೩ ॥**

**ಏತತ್** = ಇದನ್ನು **ಶ್ರುತ್ವಾ** = ಕೇಳಿ **ಸಂಪರಿಗೃಹ್ಯ** = ಚೆನ್ನಾಗಿ ಗ್ರಹಿಸಿ **ಧರ್ಮ್ಯಂ**=ಧರ್ಮ್ಯವನ್ನು **ಪ್ರವೃಹ್ಯ**=ಪೃಥಕ್ಕರಿಸಿ **ಅಣುಂ** = ಸೂಕ್ಷ್ಮನಾದ **ಏತಂ**= ಇವನನ್ನು **ಆಪ್ಯ**=ಹೊಂದಿ **ಸಃ ಮರ್ತ್ಯಃ** = ಆ ಮನುಷ್ಯನು **ಮೋದನೀಯಂ ಹಿ**= ಹರ್ಷಣೀಯನಾದ [ಆತ್ಮನನ್ನು] **ಲಬ್ಧ್ವಾ** = ಪಡೆದು **ಮೋದತೇ** = ಸಂತೋಷಪಡುತ್ತಾನೆ. **ನಚಿಕೇತಸಂ** [**ಪ್ರತಿ**] = ನಚಿಕೇತನಿಗೆ **ಸದ್ಮ**=ಮನೆಯು **ವಿವೃತಂ**=ತೆರೆದಿದೆ ಎಂದು **ಮನ್ಯೇ** = ಎಣಿಸುತ್ತೇನೆ.

೧೩. ಇದನ್ನು[೧] ಕೇಳಿ,[೨] ಚೆನ್ನಾಗಿ ಗ್ರಹಿಸಿ, ಧರ್ಮ್ಯವನ್ನು[೩] ಪೃಥಕ್ಕರಿಸಿ[೪] ಸೂಕ್ಷ್ಮನಾದ ಇವನನ್ನು ಹೊಂದಿ ಆ ಮನುಷ್ಯನು[೫] ಹರ್ಷಣೀಯನಾದ ಆತ್ಮನನ್ನು ಪಡೆದುಕೊಂಡು ಸಂತೋಷಪಡುತ್ತಾನೆ. ನಚಿಕೇತನಿಗೆ ಮನೆಯು[೬] ತೆರೆದಿರುವುದೆಂದು ಎಣಿಸುತ್ತೇನೆ.[೭]

[೧ ಮುಂದೆ ಹೇಳುವ ಆತ್ಮತತ್ತ್ವವನ್ನು.
೨ ಆಚಾರ್ಯರಿಂದ.
೩ ಧರ್ಮದಿಂದ ಕೂಡಿರುವುದನ್ನು.
೪ ಶರೀರಾದಿಗಳಿಂದ ವಿಂಗಡಿಸಿ.
೫ ಜ್ಞಾನಿಯು.
೬ ಬ್ರಹ್ಮಭವನವು.
೭ ನೀನು ಮೋಕ್ಷಕ್ಕೆ ಅರ್ಹನು ಎಂದು ಎಣಿಸುತ್ತೇನೆ.]

**ಅನ್ಯತ್ರ ಧರ್ಮಾದನ್ಯತ್ರಾಧರ್ಮಾ-**
**ದನ್ಯತ್ರಾಸ್ಮಾತ್ ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ**
**ಯತ್ತತ್ ಪಶ್ಯಸಿ ತದ್ವದ ॥ ೧೪ ॥**

ಧರ್ಮಾತ್=ಧರ್ಮಕ್ಕಿಂತ ಅನ್ಯತ್ರ=ಭಿನ್ನವಾದ, ಅಧರ್ಮಾತ್=ಅಧರ್ಮಕ್ಕಿಂತ ಅನ್ಯತ್ರ=ಭಿನ್ನವಾದ, ಅಸ್ಮಾತ್ ಕೃತಾಕೃತಾತ್=ಈ ಕಾರ್ಯಕಾರಣಗಳಿಗಿಂತ ಅನ್ಯತ್ರ=ಭಿನ್ನವಾದ, ಭೂತಾತ್ ಚ=ಭೂತಕಾಲಕ್ಕಿಂತಲೂ ಭವ್ಯಾತ್ ಚ=ಭವಿಷ್ಯತ್ಕಾಲಕ್ಕಿಂತಲೂ ಅನ್ಯತ್ರ=ಭಿನ್ನವಾದ, ಯತ್ ತತ್=ಯಾವ ಅದನ್ನು ಪಶ್ಯಸಿ=ನೋಡಿರುವೆಯೊ ತತ್=ಅದನ್ನು ವದ=ಹೇಳು.

೧೪. (ನಚಿಕೇತ): ಧರ್ಮಕ್ಕಿಂತ[1] ಭಿನ್ನವೂ, ಅಧರ್ಮಕ್ಕಿಂತ[2] ಭಿನ್ನವೂ, ಈ ಕಾರ್ಯಕಾರಣಗಳಿಗಿಂತ ಭಿನ್ನವೂ, ಭೂತಭವಿಷ್ಯತ್ಕಾಲಗಳಿಗಿಂತ[3] ಭಿನ್ನವೂ ಆದ ಯಾವುದನ್ನು[4] ನೋಡಿರುವೆಯೊ[5] ಅದನ್ನು ಹೇಳು.

[[1] ಶಾಸ್ತ್ರೀಯವಾದ ಧರ್ಮಾನುಷ್ಠಾನ, ಅದರ ಫಲ, ಅದರ ಕಾರಕಗಳು ಇವುಗಳಿಗಿಂತ.

[2] ವಿಧಿಸಿರುವ ಕರ್ಮವನ್ನು ಮಾಡದೆ ಇರುವುದರಿಂದ ಉಂಟಾಗುವ ಪಾಪಕ್ಕಿಂತ.

[3] ವರ್ತಮಾನಕಾಲಕ್ಕಿಂತಲೂ ಎಂದು ಸೇರಿಸಿಕೊಳ್ಳಬೇಕು; ಕಾಲತ್ರಯದಿಂದ ಪರಿಚ್ಛೇದ್ಯವಾಗದಿರುವುದು.

[4] ಸರ್ವವ್ಯವಹಾರ-ಗೋಚರಾತೀತವಾದ ವಸ್ತುವನ್ನು.

[5] ತಿಳಿದಿರುವೆಯೊ.]

**ಸರ್ವೇ ವೇದಾ ಯತ್ಪದಮಾಮನಂತಿ**
**ತಪಾಂಸಿ ಸರ್ವಾಣಿ ಚ ಯದ್ವದಂತಿ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥ ೧೫ ॥**

ಸರ್ವೇ=ಎಲ್ಲ ವೇದಾಃ=ವೇದಗಳು ಯತ್=ಯಾವ ಪದಂ=ಪದವನ್ನು ಆಮನಂತಿ=ಪ್ರತಿಪಾದಿಸುತ್ತವೆಯೊ, ಚ=ಮತು ಸರ್ವಾಣಿ=ಎಲ್ಲ ತಪಾಂಸಿ=ತಪಸ್ಸುಗಳು ಯತ್=ಯಾವುದನ್ನು ವದಂತಿ=ಹೇಳುತ್ತವೆಯೊ, ಯತ್=ಯಾವುದನ್ನು ಇಚ್ಛಂತಃ=ಇಚ್ಛಿಸುತ್ತ ಬ್ರಹ್ಮಚರ್ಯಂ=ಬ್ರಹ್ಮಚರ್ಯವನ್ನು ಚರಂತಿ=ಆಚರಿಸುತ್ತಾರೆಯೊ ತತ್=ಆ ಪದಂ=ಪದವನ್ನು ತೇ=ನಿನಗೆ ಸಂಗ್ರಹೇಣ=ಸಂಗ್ರಹವಾಗಿ ಬ್ರವೀಮಿ=ಹೇಳುತ್ತೇನೆ: ಏತತ್=ಇದು ಓಂ ಇತಿ=ಓಂ ಎಂಬುದು.

೧೫. (ಯಮ): ಎಲ್ಲ ವೇದಗಳೂ ಯಾವ ಪದವನ್ನು ಪ್ರತಿಪಾದಿಸುತ್ತವೆಯೊ, ಎಲ್ಲ ತಪಸ್ಸುಗಳು ಯಾವುದನ್ನು ಹೇಳುತ್ತವೆಯೊ, ಯಾವುದನ್ನು ಇಚ್ಛಿಸುತ್ತ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೊ ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ: ಇದು[1] ಓಂ[3] ಎಂಬುದು.

[[1] ಓಂ-ಶಬ್ದದ ವಾಚ್ಯವಾಗಿಯೂ ಓಂ-ಶಬ್ದವನ್ನು ಪ್ರತೀಕವಾಗಿ ಉಳ್ಳದ್ದೂ ಆದ ವಸ್ತು.
[2] ಓಂಕಾರ ಅಥವಾ ಪ್ರಣವವು ಬ್ರಹ್ಮದ ವಾಚಕವು ಮತ್ತು ಪ್ರತೀಕವು.]

**ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ ೧೬ ॥**

ಏತತ್ ಹಿ = ಈ ಅಕ್ಷರಂ ಏವ = ಅಕ್ಷರವೇ ಬ್ರಹ್ಮ = ಬ್ರಹ್ಮವು, ಏತತ್ ಹಿ = ಈ ಅಕ್ಷರಂ ಏವ = ಅಕ್ಷರವೇ ಪರಂ = ಪರವು; ಏತತ್ ಹಿ = ಈ ಅಕ್ಷರಂ = ಅಕ್ಷರವನ್ನು ಜ್ಞಾತ್ವಾ = ತಿಳಿದುಕೊಂಡು ಯಃ = ಯಾವನು ಯತ್ = ಯಾವುದನ್ನು ಇಚ್ಛತಿ = ಬಯಸುತ್ತಾನೆಯೊ ತಸ್ಯ = ಅವನಿಗೆ ತತ್ [ಭವತಿ] = ಅದೇ ಆಗುತ್ತದೆ.

೧೬. ಈ ಅಕ್ಷರವೇ ಬ್ರಹ್ಮ,[1] ಈ ಅಕ್ಷರವೇ ಪರ;[2] ಈ ಅಕ್ಷರವನ್ನೇ[3] ತಿಳಿದುಕೊಂಡು[4] ಯಾವನು ಯಾವುದನ್ನು[5] ಬಯಸುತ್ತಾನೆಯೊ ಅವನಿಗೆ ಅದೇ ಆಗುವುದು.[6]

[[1] ಅಪರಬ್ರಹ್ಮ.
[2] ಪರಬ್ರಹ್ಮ.
[3] ಓಂಕಾರವು ಪರಬ್ರಹ್ಮ ಅಪರಬ್ರಹ್ಮ ಇವೆರಡಕ್ಕೂ ಪ್ರತೀಕವಾಗಿರುತ್ತದೆ.
[4] ಉಪಾಸಿಸಿ.
[5] ಪರಬ್ರಹ್ಮವನ್ನಾಗಲಿ, ಅಪರಬ್ರಹ್ಮವನ್ನಾಗಲಿ.
[6] ಪರಬ್ರಹ್ಮವಾದರೆ ತಿಳಿಯತಕ್ಕದ್ದು, ಅಪರಬ್ರಹ್ಮವಾದರೆ ಹೊಂದತಕ್ಕದ್ದು.]

**ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್ ।**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ ೧೭ ॥**

ಏತತ್ = ಈ ಆಲಂಬನಂ = ಆಧಾರವು ಶ್ರೇಷ್ಠಂ = ಶ್ರೇಷ್ಠವಾದುದು, ಏತತ್ = ಈ ಆಲಂಬನಂ = ಆಧಾರವು ಪರಂ = ಪರವಾದುದು; ಏತತ್ = ಈ ಆಲಂಬನಂ = ಆಧಾರವನ್ನು ಜ್ಞಾತ್ವಾ = ತಿಳಿದುಕೊಂಡು ಬ್ರಹ್ಮಲೋಕೇ = ಬ್ರಹ್ಮಲೋಕದಲ್ಲಿ ಮಹೀಯತೇ = ಮಹಿಮೆಯನ್ನು ಹೊಂದುತ್ತಾನೆ.

೧೭. ಈ ಆಧಾರವು[1] ಶ್ರೇಷ್ಠವಾದುದು, ಈ ಆಧಾರವು ಪರವಾದುದು;[2] ಈ ಆಧಾರವನ್ನು ತಿಳಿದುಕೊಂಡು ಬ್ರಹ್ಮಲೋಕದಲ್ಲಿ[3] ಮಹಿಮೆಯನ್ನು ಹೊಂದುತ್ತಾನೆ.[4]

[[೧] ಬ್ರಹ್ಮಪ್ರಾಪ್ತಿಗೆ ಬೇಕಾದ ಆಧಾರಗಳಲ್ಲೆಲ್ಲ.
[೨] ಅಪರವೂ ಆದುದು.
[೩] ಪರಬ್ರಹ್ಮದಲ್ಲಿಯೂ ಅಪರಬ್ರಹ್ಮದಲ್ಲಿಯೂ.
[೪] ಬ್ರಹ್ಮಭೂತನಾಗಿ ಬ್ರಹ್ಮದಂತೆ ಉಪಾಸ್ಯನಾಗುತ್ತಾನೆ.]

**ನ ಜಾಯತೇ ಮ್ರಿಯತೇ ವಾ ವಿಪಶ್ಚಿ-**
**ನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೧೮ ॥**

**ವಿಪಶ್ಚಿತ್**=ಜ್ಞಾನಿಯು **ನ ಜಾಯತೇ**=ಹುಟ್ಟುವುದೂ ಇಲ್ಲ **[ನ] ಮ್ರಿಯತೇ ವಾ**= ಸಾಯುವುದೂ ಇಲ್ಲ; **ಅಯಂ**=ಇವನು **ಕುತಶ್ಚಿತ್**=ಯಾವುದರಿಂದಲೂ **ನ [ಬಭೂವ]**= ಹುಟ್ಟಲಿಲ್ಲ, [**ಅಸ್ಮಾತ್** = ಇವನಿಂದ] **ಕಶ್ಚಿತ್** = ಯಾರೂ **ನ ಬಭೂವ**= ಹುಟ್ಟಲಿಲ್ಲ; **ಅಯಂ** = ಇವನು **ಅಜಃ** = ಜನ್ಮರಹಿತನು **ನಿತ್ಯಃ** = ನಿತ್ಯನು **ಶಾಶ್ವತಃ** = ಶಾಶ್ವತನು **ಪುರಾಣಃ** = ಪುರಾಣನು; **ಶರೀರೇ ಹನ್ಯಮಾನೇ** = ಶರೀರವು ನಾಶವಾಗುತ್ತಿದ್ದರೂ **ನ ಹನ್ಯತೇ** = ನಾಶವಾಗುವುದಿಲ್ಲ.

**೧೮.** ಜ್ಞಾನಿಯು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ; ಇವನು ಯಾವುದರಿಂದಲೂ ಹುಟ್ಟಲಿಲ್ಲ, (ಇವನಿಂದ) ಯಾರೂ ಹುಟ್ಟಲಿಲ್ಲ. ಈತನು ಜನ್ಮರಹಿತನು ನಿತ್ಯನು ಶಾಶ್ವತನು ಪುರಾಣನು; ಶರೀರವು ನಾಶವಾಗು ತ್ತಿದ್ದರೂ ನಾಶವಾಗುವುದಿಲ್ಲ.

[ಹುಟ್ಟು, ನಾಶ ಎಂಬ ಮೊದಲನೆಯ ಮತ್ತು ಕೊನೆಯ ವಿಕಾರಗಳು ಆತ್ಮನಿಗೆ ಇಲ್ಲವೆಂದು ಹೇಳಿದರೆ ಇತರ ವಿಕಾರಗಳೂ ಇಲ್ಲವೆಂದು ಅರ್ಥವಾಗುತ್ತದೆ.]

**ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

**ಹಂತಾ** = ಕೊಲ್ಲುವವನು **ಹಂತುಂ** = ಕೊಲ್ಲುವುದಕ್ಕೆ **ಮನ್ಯತೇ ಚೇತ್** = ಯೋಚನೆಮಾಡಿದರೆ, **ಹತಃ** = ಕೊಲ್ಲಲ್ಪಟ್ಟವನು **ಹತಂ** = ಕೊಲ್ಲಲ್ಪಟ್ಟವನನ್ನಾಗಿ **ಮನ್ಯತೇ ಚೇತ್** = ಭಾವಿಸಿದರೆ, **ತೌ ಉಭೌ** = ಅವರಿಬ್ಬರೂ **ನ ವಿಜಾನೀತಃ** = ಅರಿಯರು; **ಅಯಂ** = ಇವನು **ನ ಹಂತಿ** = ಕೊಲ್ಲುವುದಿಲ್ಲ, **ನ ಹನ್ಯತೇ** = ಕೊಲ್ಲಲ್ಪಡುವುದೂ ಇಲ್ಲ.

೧೯. ಕೊಲ್ಲುವವನು ಕೊಲ್ಲುವುದಕ್ಕೆ[೧] ಯೋಚನೆಮಾಡಿದರೆ, ಕೊಲ್ಲಲ್ಪಟ್ಟವನು (ತನ್ನನ್ನು) ಕೊಲ್ಲಲ್ಪಟ್ಟವನನ್ನಾಗಿ[೨] ಭಾವಿಸಿದರೆ, ಅವರಿಬ್ಬರೂ ಅರಿಯರು. ಇವನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ.

[[೧] 'ಇವನನ್ನು ಕೊಲ್ಲುತ್ತೇನೆ' ಎಂದು.
[೨] 'ನಾನು ಕೊಲ್ಲಲ್ಪಟ್ಟೆನು' ಎಂದು.]

**ಅಣೋರಣೀಯಾನ್ ಮಹತೋ ಮಹೀಯಾನ್**
**ಆತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್ ।**
**ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಪ್ರಸಾದಾನ್ಮಹಿಮಾನಮಾತ್ಮನಃ ॥ ೨೦ ॥**

**ಅಣೋಃ**=ಅಣುವಿಗಿಂತ **ಅಣೀಯಾನ್**=ಅಣುವಾದ **ಮಹತಃ**=ಮಹತ್ತಿಗಿಂತ **ಮಹೀಯಾನ್**=ಮಹತ್ತಾದ **ಆತ್ಮಾ**=ಆತ್ಮನು **ಅಸ್ಯ**=ಈ **ಜಂತೋಃ**=ಪ್ರಾಣಿಯ **ಗುಹಾಯಾಂ**=ಹೃದಯದಲ್ಲಿ **ನಿಹಿತಃ**=ಸ್ಥಿತನಾಗಿರುವನು; **ಅಕ್ರತುಃ**=ಕಾಮವಿಲ್ಲದವನು **ತಂ**=ಆತ್ಮನನ್ನು **ಪಶ್ಯತಿ**=ನೋಡುತ್ತಾನೆ; **ಧಾತುಪ್ರಸಾದಾತ್**=ಧಾತುಗಳ ಪ್ರಸನ್ನತೆಯಿಂದ **ಆತ್ಮನಃ**=ಆತ್ಮನ **ಮಹಿಮಾನಂ**=ಮಹಿಮೆಯನ್ನು **ಪಶ್ಯತಿ**=ನೋಡುತ್ತಾನೆ; [**ತತಃ**=ಅದರಿಂದ] **ವೀತಶೋಕಃ** [**ಭವತಿ**]=ಶೋಕವಿಲ್ಲದವನಾಗುವನು.

**೨೦.** ಅಣುವಿಗಿಂತ ಅಣುವಾದ, ಮಹತ್ತಿಗಿಂತ ಮಹತ್ತಾದ[೧] ಆತ್ಮನು ಈ ಪ್ರಾಣಿ(ಸಮೂಹದ) ಹೃದಯದಲ್ಲಿ ಸ್ಥಿತನಾಗಿರುವನು. ಕಾಮವಿಲ್ಲದವನು ಆತ್ಮನನ್ನು ನೋಡುತ್ತಾನೆ; ಧಾತುಗಳ[೨] ಪ್ರಸನ್ನತೆಯಿಂದ ಆತ್ಮನ ಮಹಿಮೆಯನ್ನು[೩] ನೋಡುತ್ತಾನೆ; (ಅದರಿಂದ) ಶೋಕವಿಲ್ಲದವನಾಗುವನು.

[[೧] ಅಣುವಾದ ವಸ್ತುವಾಗಲಿ ಮಹತ್ತಾದ ವಸ್ತುವಾಗಲಿ ನಿತ್ಯನಾದ ಆತ್ಮನಿಂದಲೇ ಸ್ವರೂಪವನ್ನು ಹೊಂದಿರುತ್ತದೆ.
[೨] ಮನಸ್ಸೇ ಮೊದಲಾದ ಕರಣಗಳು.
[೩] ಕರ್ಮನಿಮಿತ್ತವಾದ ವೃದ್ಧಿಕ್ಷಯಗಳಿಲ್ಲದ.]

**ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।**
**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ೨೧ ॥**

[ಅಯಂ ಆತ್ಮಾ = ಈ ಆತ್ಮನು] ಆಸೀನಃ = ಕುಳಿತುಕೊಂಡು ದೂರಂ ವ್ರಜತಿ=ದೂರಹೋಗುತ್ತಾನೆ; ಶಯಾನಃ = ಮಲಗಿಕೊಂಡು ಸರ್ವತಃ=ಎಲ್ಲೆಲ್ಲೂ ಯಾತಿ = ಹೋಗುತ್ತಾನೆ; ತಂ = ಆ ಮದಾಮದಂ = ಮದಾಮದರೂಪನಾದ ದೇವಂ=ದೇವನನ್ನು ಮದನ್ಯಃ=ನನಗಿಂತ ಬೇರೆಯವನು ಕಃ=ಯಾವನು ಜ್ಞಾತುಂ ಅರ್ಹತಿ = ತಿಳಿಯಬಲ್ಲನು?

೨೧. (ಈ ಆತ್ಮನು) ಕುಳಿತುಕೊಂಡು ದೂರಹೋಗುತ್ತಾನೆ, ಮಲಗಿಕೊಂಡು ಎಲ್ಲೆಲ್ಲಿಯೂ ಹೋಗುತ್ತಾನೆ. ಮದಾಮದರೂಪನಾದ[೧] ಆ ದೇವನನ್ನು ನನಗಿಂತ ಬೇರೆ ಯಾವನು ತಿಳಿಯಬಲ್ಲನು?

[ಕಾಮಿಗಳಾದ ಪ್ರಾಕೃತಪುರುಷರಿಗೆ ಆತ್ಮನು ದುರ್ವಿಜ್ಞೇಯ; ಏಕೆಂದರೆ ಆತ್ಮನು ಸ್ಥಿತಿ ಗತಿ ನಿತ್ಯತ್ವ ಅನಿತ್ಯತ್ವ ಮೊದಲಾದ ವಿರುದ್ಧ ಧರ್ಮಗಳನ್ನು ಹೊಂದಿರುತ್ತಾನೆ.
[೧] ಹರ್ಷವುಳ್ಳವನೂ ಹರ್ಷವಿಲ್ಲದವನೂ (ಸಮುದೋಽಮುದಶ್ಚ).]

**ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೨೨ ॥**

ಅನವಸ್ಥೇಷು=ಅನಿತ್ಯವಾದ ಶರೀರೇಷು=ಶರೀರಗಳಲ್ಲಿ ಅವಸ್ಥಿತಂ=ನಿತ್ಯನಾದ ಅಶರೀರಂ = ಅಶರೀರನಾದ ಮಹಾಂತಂ = ಮಹತ್ತಮನಾದ ವಿಭುಂ = ಸರ್ವವ್ಯಾಪಿಯಾದ ಆತ್ಮಾನಂ = ಆತ್ಮನನ್ನು ಮತ್ವಾ = ತಿಳಿದುಕೊಂಡು ಧೀರಃ = ಧೀಮಂತನು ನ ಶೋಚತಿ = ಶೋಕಿಸುವುದಿಲ್ಲ.

೨೨. ಅನಿತ್ಯವಾದ ಶರೀರಗಳಲ್ಲಿ[೧] ನಿತ್ಯನಾದ,[೨] ಅಶರೀರನಾದ, ಮಹತ್ತಮನಾದ ಸರ್ವವ್ಯಾಪಿಯಾದ ಆತ್ಮನನ್ನು[೩] ತಿಳಿದುಕೊಂಡು ಧೀರನು ಶೋಕಿಸುವುದಿಲ್ಲ.

[[೧] ದೇವಪಿತೃಮನುಷ್ಯಾದಿ ಶರೀರಗಳಲ್ಲಿ.
[೨] ವಿಕಾರರಹಿತನಾದ.
[೩] ಪ್ರತ್ಯಗಾತ್ಮನನ್ನು.]

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯ-**
**ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥ ೨೩ ॥**

ಅಯಂ=ಈ ಆತ್ಮಾ=ಆತ್ಮನು ಪ್ರವಚನೇನ=ಪ್ರವಚನದಿಂದ ನ ಲಭ್ಯಃ= ಲಭ್ಯನಲ್ಲ; ಮೇಧಯಾ=ಮೇಧಾಶಕ್ತಿಯಿಂದ ನ=ಲಭ್ಯನಲ್ಲ, ಬಹುನಾ ಶ್ರುತೇನ= ಬಹಳ ಶ್ರವಣದಿಂದ ನ=ಲಭ್ಯನಲ್ಲ; ಏಷಃ=ಈ ಸಾಧಕನು ಯಂ ಏವ=ಯಾವನನ್ನೇ ವೃಣುತೇ=ಬೇಡುತ್ತಾನೆಯೊ ತೇನ=ಅವನಿಂದ ಲಭ್ಯಃ=ಲಭ್ಯನು; ತಸ್ಯ=ಅವನಿಗೆ ಏಷಃ=ಈ ಆತ್ಮಾ=ಆತ್ಮನು ಸ್ವಾಂ=ತನ್ನ ತನೂಂ=ತನುವನ್ನು ವಿವೃಣುತೇ= ತೋರಿಸುವನು.

೨೩. ಈ ಆತ್ಮನು ಪ್ರವಚನದಿಂದ[೧] ಲಭ್ಯನಲ್ಲ; ಮೇಧಾಶಕ್ತಿ ಯಿಂದಲೂ[೨] ಬಹಳ ಶ್ರವಣದಿಂದಲೂ[೩] ಲಭ್ಯನಲ್ಲ; ಯಾವನನ್ನೇ[೪] ಈ ಸಾಧಕನು ಬೇಡುತ್ತಾನೆಯೊ ಅವನಿಂದ[೫] ಲಭ್ಯನು;[೬] ಅವನಿಗೆ ಈ ಆತ್ಮನು ತನ್ನ ತನುವನ್ನು[೭] ತೋರಿಸುತ್ತಾನೆ.

[[೧] ಅನೇಕ ವೇದಗಳನ್ನು ಓದಿದುದರಿಂದ.
[೨] ಗ್ರಂಥಗಳ ಅರ್ಥವನ್ನು ಧಾರಣೆಮಾಡುವ ಶಕ್ತಿಯಿಂದ.
[೩] ಕೇವಲ ಶ್ರವಣದಿಂದ.
[೪] ತನ್ನ ಆತ್ಮನನ್ನೇ.
[೫] ಬೇಡುವ ಆತ್ಮನಿಂದ.
[೬] ಆತ್ಮನು ದೊರೆಯುವನು.
[೭] ಯಥಾರ್ಥವಾದ ಸ್ವರೂಪವನ್ನು.]

**ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।**
**ನಾಶಾಂತಮನಸೋ ವಾಽಪಿ ಪ್ರಜ್ಞಾನೇನೈನಮಾಪ್ನುಯಾತ್ ॥ ೨೪ ॥**

ದುಶ್ಚರಿತಾತ್=ದುರಾಚಾರದಿಂದ ಅವಿರತಃ=ನಿವೃತ್ತನಾಗದವನು, ಅಶಾಂ- ತಃ=ಶಾಂತನಲ್ಲದವನು ಅಸಮಾಹಿತಃ=ಸಮಾಹಿತನಾಗದವನು ಅಶಾಂತಮನಸಃ ವಾ ಅಪಿ=ಅಥವಾ ಮನಃಶಾಂತಿಯಿಲ್ಲದವನು ಪ್ರಜ್ಞಾನೇನ=ಪ್ರಜ್ಞಾನದಿಂದ ಏನಂ=ಇವನನ್ನು ನ ಆಪ್ನುಯಾತ್=ಪಡೆಯಲಾರನು.

೨೪. ದುರಾಚಾರದಿಂದ[೧] ನಿವೃತ್ತನಾಗದವನೂ, ಶಾಂತನಲ್ಲದ ವನೂ[೨] ಸಮಾಹಿತನಲ್ಲದವನೂ,[೩] ಮನಃಶಾಂತಿಯಿಲ್ಲದವನೂ[೪] ಪ್ರಜ್ಞಾನ ದಿಂದ ಇವನನ್ನು[೫] ಪಡೆಯಲಾರರು.

[[೧] ಪಾಪಕರ್ಮದಿಂದ.
[೨] ಇಂದ್ರಿಯಗಳ ಲೋಲತೆಯನ್ನು ಬಿಡದಿರುವವನು.
[೩] ವಿಕ್ಷಿಪ್ತವಾದ ಮನಸ್ಸುಳ್ಳವನು.

[4] ಸಮಾಹಿತನಾದರೂ ಸಮಾಧಾನದ ಫಲವನ್ನು ಬಯಸುವುದರಿಂದ ಮನಃಶಾಂತಿಯಿಲ್ಲದಿರುವವನು.

[5] ಆತ್ಮನನ್ನು.]

**ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ ೨೫ ॥**

ಯಸ್ಯ = ಯಾವನಿಗೆ ಬ್ರಹ್ಮ ಚ ಕ್ಷತ್ರಂ ಚ = ಬ್ರಹ್ಮವು ಮತ್ತು ಕ್ಷತ್ರವು ಉಭೇ = ಎರಡೂ ಓದನಃ ಭವತಃ = ಅನ್ನವಾಗಿರುವುವೊ, ಯಸ್ಯ = ಯಾವನಿಗೆ ಮೃತ್ಯುಃ = ಮೃತ್ಯುವು ಉಪಸೇಚನಂ = ಉಪಸೇಚನವೊ ಸಃ = ಅವನು ಯತ್ರ [ಅಸ್ತಿ] = ಎಲ್ಲಿರುವನು [ಎಂಬುದನ್ನು] ಇತ್ಥಾ = ಹೀಗೆ ಕಃ = ಯಾವನು ವೇದ = ಅರಿಯುವನು?

**೨೫.** ಯಾವನಿಗೆ ಬ್ರಾಹ್ಮಣಕ್ಷತ್ರಿಯರಿಬ್ಬರೂ[1] ಅನ್ನವಾಗಿರುವರೊ, ಯಾವನಿಗೆ ಮೃತ್ಯುವು ಉಪಸೇಚನವಾಗಿರುವುದೊ[2] ಅವನು[3] ಎಲ್ಲಿರುವನೆಂಬುದನ್ನು ಹೀಗೆ[4] ಯಾವನು ಅರಿಯುವನು?[5]

[[1] ಎಂದರೆ ಎಲ್ಲರೂ.

[2] ಆಹಾರಕ್ಕೆ ರುಚಿಕೊಡುವ ಶಾಖಾದಿಖಾದ್ಯಗಳು.

[3] ಆತ್ಮನು.

[4] ಹಿಂದೆ ಹೇಳಿದ ಸಾಧನಗಳನ್ನು ಹೊಂದಿದವನಂತೆ.

[5] ಅಜ್ಞಾನಿಗಳು ಆತ್ಮವನ್ನು ಅರಿಯಲಾರರು ಎಂದರ್ಥ.]

# ಮೂರನೆಯ ವಲ್ಲೀ

**ಋತಂ ಪಿಬಂತೌ ಸುಕೃತಸ್ಯ ಲೋಕೇ**
**ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।**
**ಛಾಯಾತಪೌ ಬ್ರಹ್ಮವಿದೋ ವದಂತಿ**
**ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ ॥ ೧ ॥**

**ಲೋಕೇ** = ಶರೀರದಲ್ಲಿ **ಸುಕೃತಸ್ಯ** = ಸುಕೃತದ **ಋತಂ** = ಕರ್ಮಫಲವನ್ನು **ಪಿಬಂತೌ**=ಪಾನಮಾಡುತ್ತಿರುವ **ಪರಮೇ ಪರಾರ್ಧೇ** = ಪರಮವಾದ ಹಾರ್ದಾಕಾಶ ದಲ್ಲಿ **ಗುಹಾಂ** = ಬುದ್ಧಿಯಲ್ಲಿ **ಪ್ರವಿಷ್ಟೌ** = ಪ್ರವೇಶಿಸಿರುವ [ದ್ವೌ = ಇಬ್ಬರನ್ನು] **ಛಾಯಾತಪೌ**= ನೆರಳುಬಿಸಿಲುಗಳೆಂದು **ಬ್ರಹ್ಮವಿದಃ** = ಬ್ರಹ್ಮಜ್ಞಾನಿಗಳು **ಪಂಚಾ-ಗ್ನಯಃ** = ಪಂಚಾಗ್ನಿಗಳು **ಯೇ ಚ ತ್ರಿಣಾಚಿಕೇತಾಃ** = ಮತ್ತು ತ್ರಿಣಾಚಿಕೇತರು **ವದಂತಿ** = ಹೇಳುತ್ತಾರೆ.

**೧.** (ಈ) ಶರೀರದಲ್ಲಿ ಪರಮವಾದ[೧] ಹೃದಯಾಕಾಶದಲ್ಲಿರುವ[೨] ಬುದ್ಧಿಯಲ್ಲಿ ಸುಕೃತದ[೩] ಕರ್ಮಫಲವನ್ನು ಪಾನಮಾಡುತ್ತಿರುವ[೪] ಇಬ್ಬರು ಪ್ರವೇಶಿಸಿರುತ್ತಾರೆ. ಇವರನ್ನು ನೆರಳುಬಿಸಿಲುಗಳೆಂದು[೫] ಬ್ರಹ್ಮಜ್ಞಾನಿಗಳೂ, ಮೂರು ಸಲ ನಾಚಿಕೇತಾಗ್ನಿಯನ್ನು ಚಯನಮಾಡಿರುವ ಪಂಚಾಗ್ನಿಗಳೂ[೬] ಹೇಳುತ್ತಾರೆ.

[ಎರಡನೆಯ ವಲ್ಲಿಯ ನಾಲ್ಕನೆಯ ಮಂತ್ರದಲ್ಲಿ ವಿದ್ಯೆಯು ಮತ್ತು ಅವಿದ್ಯೆಯು ವಿರುದ್ಧವಾದ ಫಲವುಳ್ಳವುಗಳೆಂದು ಹೇಳಿರುತ್ತದೆ. ಅವುಗಳನ್ನು ಫಲಸಮೇತ ಯಥಾವತ್ತಾಗಿ ನಿರ್ಣಯಮಾಡಲು ಈ ವಲ್ಲಿಯಲ್ಲಿ ರಥದ ರೂಪಕವನ್ನು ಕಲ್ಪಿಸಿರುತ್ತದೆ.

[೧] ಹೊರಗಿನ ಆಕಾಶಕ್ಕೆ ಹೋಲಿಸಿದರೆ ಇದು ಉತ್ತಮವಾಗಿರುತ್ತದೆ.

[೨] ಹೃದಯಾಕಾಶದಲ್ಲಿ ಬ್ರಹ್ಮವು ಲಭ್ಯವಾಗುವುದರಿಂದ ಅದಕ್ಕೆ ಪರಾರ್ಧ ಅಥವಾ ಬ್ರಹ್ಮನ ಸ್ಥಾನವೆಂದು ಹೆಸರು.

[೩] ಸ್ವತಃ ಮಾಡಿದ.

[೪] ಜೀವಾತ್ಮಪರಮಾತ್ಮರಿಬ್ಬರೂ ಹೃದಯಾಕಾಶದಲ್ಲಿ ಹೊಕ್ಕಿರುತ್ತಾರೆ. ಜೀವಾತ್ಮನು ಕರ್ಮಫಲವನ್ನು ಅನುಭವಿಸುತ್ತಿರುವನು. ಪರಮಾತ್ಮನಿಗೆ ಈ ಅನುಭವವಿಲ್ಲ. ಆದರೂ ಅನುಭವಿಸುತ್ತಿರುವವನ ಸಂಬಂಧವು ಪರಮಾತ್ಮನಿಗೂ ಇರುವ ಕಾರಣ ಛತ್ರಿನ್ಯಾಯದಿಂದ ಇಬ್ಬರೂ ಅನುಭವಿಸುತ್ತಿರುವರೆಂದು ಹೇಳಿದೆ.

[೫] ಜೀವಾತ್ಮನು ಸಂಸಾರಿ, ಪರಮಾತ್ಮನು ಅಸಂಸಾರಿ; ಆದುದರಿಂದ ಇಬ್ಬರು ನೆರಳುಬಿಸಿಲುಗಳಂತೆ ವಿಲಕ್ಷಣರಾದವರು ಎಂದರ್ಥ.

[೬] ಗೃಹಸ್ಥರು.]

**ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ ಪರಮ್ ।**
**ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ ॥ ೨ ॥**

ಯಃ=ಯಾವುದು ಈಜಾನಾನಾಂ=ಯಜ್ಞಮಾಡುವವರಿಗೆ ಸೇತುಃ=ಸೇತುವೆ ಯಂತೆ ಇರುವುದೊ [ತಂ=ಅಂಥ] ನಾಚಿಕೇತಂ=ನಾಚಿಕೇತಾಗ್ನಿಯನ್ನು [ಜ್ಞಾತುಂ ಚೇತುಂ ಚ = ತಿಳಿದುಕೊಳ್ಳುವುದಕ್ಕೂ ಚಯನಮಾಡುವುದಕ್ಕೂ] ಶಕೇಮಹಿ= ಶಕ್ತರಾಗಿರುವೆವು. ಯತ್=ಯಾವುದು ತಿತೀರ್ಷತಾಂ=ದಾಟಲು ಇಚ್ಛಿಸುವವರಿಗೆ ಅಭಯಂ=ಭಯರಹಿತವಾದ ಪಾರಂ=ದಡವಾಗಿರುವುದೊ, [ಯತ್=ಯಾವುದು ಬ್ರಹ್ಮವಿದಾಂ=ಬ್ರಹ್ಮಜ್ಞಾನಿಗಳಿಗೆ] ಪರಂ [ಆಶ್ರಯಂ]=ಪರಮಾಶ್ರಯವಾಗಿರು ವುದೊ [ತತ್=ಆ] ಅಕ್ಷರಂ=ಅಕ್ಷರವಾದ ಬ್ರಹ್ಮ=ಬ್ರಹ್ಮವನ್ನು [ಜ್ಞಾತುಂ ಶಕೇಮಹಿ=ತಿಳಿದುಕೊಳ್ಳಲು ಶಕ್ತರಾಗಿರುವೆವು].

೨. ಯಾವುದು ಯಜ್ಞಮಾಡುವವರಿಗೆ ಸೇತುವೆಯಂತೆ[೧] ಇರುವುದೊ (ಅಂಥ) ನಾಚಿಕೇತಾಗ್ನಿಯನ್ನು (ತಿಳಿದುಕೊಳ್ಳುವುದಕ್ಕೂ ಚಯನಮಾಡುವು ದಕ್ಕೂ ನಾವು) ಶಕ್ತರಾಗಿರುವೆವು. ಯಾವುದು ದಾಟಲು ಇಚ್ಛಿಸುವವರಿಗೆ ಭಯರಹಿತವಾದ ದಡವಾಗಿರುವುದೊ,[೨] (ಯಾವುದು ಬ್ರಹ್ಮಜ್ಞಾನಿಗಳಿಗೆ) ಪರಮಾಶ್ರಯವಾಗಿರುವುದೊ ಅಂಥ ಅಕ್ಷರವಾದ ಬ್ರಹ್ಮವನ್ನು (ತಿಳಿದು ಕೊಳ್ಳಲು ಶಕ್ತರಾಗಿರುವೆವು).

[[೧] ದುಃಖವನ್ನು ದಾಟಲು.

[೨] ಸಂಸಾರದ ಆಚೆಯ ದಡವಾಗಿರುವುದೊ.]

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ೩ ॥**

ಆತ್ಮಾನಂ=ಆತ್ಮನನ್ನು ರಥಿನಂ=ರಥಿ ಎಂದು ವಿದ್ಧಿ=ತಿಳಿ, ಶರೀರಂ ತು= ಶರೀರವನ್ನು ರಥಂ ಏವ=ರಥವೆಂದು [ವಿದ್ಧಿ=ತಿಳಿ], ಬುದ್ಧಿಂ ತು=ಬುದ್ಧಿಯನ್ನು ಸಾರಥಿಂ=ಸಾರಥಿ ಎಂದು ವಿದ್ಧಿ=ತಿಳಿ, ಮನಃ ಚ=ಮತ್ತು ಮನಸ್ಸನ್ನು ಪ್ರಗ್ರಹಂ ಏವ=ಕಡಿವಾಣವೆಂದು [ವಿದ್ಧಿ=ತಿಳಿ].

೩. ಆತ್ಮನನ್ನು ರಥಿಯೆಂದೂ,[೧] ಶರೀರವನ್ನು ರಥವೆಂದೂ,[೨] ಬುದ್ಧಿಯನ್ನು ಸಾರಥಿಯೆಂದೂ,[೩] ಮನಸ್ಸನ್ನು ಕಡಿವಾಣವೆಂದೂ[೪] ತಿಳಿ.

[೧ ಕರ್ಮಫಲವನ್ನು ಅನುಭವಿಸುತ್ತಿರುವ ಸಂಸಾರಿಯು ರಥದ ಒಡೆಯನು.

೨ ಏಕೆಂದರೆ ರಥಕ್ಕೆ ಕಟ್ಟಿದ ಕುದುರೆಗಳಂತಿರುವ ಇಂದ್ರಿಯಗಳಿಂದ ಶರೀರವು ಒಯ್ಯಲ್ಪಡುತ್ತದೆ.

೩ ಅಧ್ಯವಸಾಯಲಕ್ಷಣವುಳ್ಳ ಬುದ್ಧಿಯು ಒಯ್ದಲ್ಲಿಗೆ ಶರೀರವು ಹೋಗುವುದು.

೪ ಕಡಿವಾಣದ ಹಿಡಿತದಿಂದ ಕುದುರೆಗಳು ಮುಂದೆ ಹೋಗುವ ಹಾಗೆ ಸಂಕಲ್ಪವಿಕಲ್ಪಲಕ್ಷಣವುಳ್ಳ ಮನಸ್ಸಿನಿಂದ ಶ್ರೋತ್ರವೇ ಮೊದಲಾದ ಕರಣಗಳು ಪ್ರವರ್ತಿಸುತ್ತಿರುವುವು.]

**ಇಂದ್ರಿಯಾಣಿ ಹಯಾನಾಹು-**
**ರ್ವಿಷಯಾಂಸ್ತೇಷು ಗೋಚರಾನ್ ।**
**ಆತ್ಮೇಂದ್ರಿಯಮನೋಯುಕ್ತಂ**
**ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥**

**ಇಂದ್ರಿಯಾಣಿ**=ಇಂದ್ರಿಯಗಳನ್ನು **ಹಯಾನ್**=ಕುದುರೆಗಳೆಂದು **ಆಹುಃ**=ಹೇಳುತ್ತಾರೆ, **ವಿಷಯಾನ್**=ವಿಷಯಗಳನ್ನು **ತೇಷು ಗೋಚರಾನ್**=ಅವುಗಳ ಮಾರ್ಗಗಳೆಂದು [ಆಹುಃ=ಹೇಳುತ್ತಾರೆ], **ಆತ್ಮೇಂದ್ರಿಯಮನೋಯುಕ್ತಂ**=ಶರೀರೇಂದ್ರಿಯಮನಸ್ಸುಗಳಿಂದ ಕೂಡಿದ [ಆತ್ಮಾನಂ=ಆತ್ಮನನ್ನು] **ಭೋಕ್ತಾ ಇತಿ**=ಸಂಸಾರಿಯೆಂದು **ಮನೀಷಿಣಃ**=ವಿವೇಕಿಗಳು **ಆಹುಃ**=ಹೇಳುತ್ತಾರೆ.

೪. ಇಂದ್ರಿಯಗಳನ್ನು ಕುದುರೆಗಳೆಂದು ಹೇಳುತ್ತಾರೆ,[೧] ವಿಷಯಗಳನ್ನು ಅವುಗಳ[೨] ಮಾರ್ಗಗಳೆಂದು (ಹೇಳುತ್ತಾರೆ); ಶರೀರ, ಇಂದ್ರಿಯ, ಮನಸ್ಸು—ಇವುಗಳಿಂದ ಕೂಡಿದ (ಆತ್ಮನನ್ನು) ಸಂಸಾರಿ[೩] ಎಂದು ವಿವೇಕಿಗಳು ಹೇಳುತ್ತಾರೆ.

[೧ ರಥಕಲ್ಪನಾಕುಶಲರು.

೨ ಇಂದ್ರಿಯಗಳ.

೩ ಕೇವಲ ಆತ್ಮನಿಗೆ ಭೋಕ್ತೃತ್ವವು ಇರುವುದಿಲ್ಲ. ಬುದ್ಧಿಯೇ ಮೊದಲಾದ ಉಪಾಧಿಗಳಿಂದಲೇ ಅವನಿಗೆ ಭೋಕ್ತೃತ್ವವು ಉಂಟಾಗಿದೆ.]

**ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೫ ॥**

ಯಃ ತು=ಯಾವನು ಸದಾ=ಯಾವಾಗಲೂ ಅಯುಕ್ತೇನ=ಅಯುಕ್ತವಾದ ಮನಸಾ=ಮನಸ್ಸಿನಿಂದ ಅವಿಜ್ಞಾನವಾನ್ ಭವತಿ=ಅನಿಪುಣನಾಗಿರುವನೊ ತಸ್ಯ= ಅವನ ಇಂದ್ರಿಯಾಣಿ=ಇಂದ್ರಿಯಗಳು ಸಾರಥೇಃ=ಸಾರಥಿಯ ದುಷ್ಟಾಶ್ವಾಃ ಇವ=ತುಂಟ ಕುದುರೆಗಳಂತೆ ಅವಶ್ಯಾನಿ=ವಶವಾಗದೆ ಇರುವುವು.

೫. ಯಾವನು ಯಾವಾಗಲೂ ಅಯುಕ್ತವಾದ[೧] ಮನಸ್ಸಿನಿಂದ ಕೂಡಿದವನಾಗಿ ಅನಿಪುಣನಾಗಿರುವನೊ[೨] ಅವನ[೩] ಇಂದ್ರಿಯಗಳು ಸಾರಥಿಯ ತುಂಟ[೪] ಕುದುರೆಗಳಂತೆ ವಶವಾಗದೆ ಇರುವುವು.

[[೧] ಅಸಮಾಹಿತವಾದ.
[೨] ಪ್ರವೃತ್ತಿಯಲ್ಲೂ ನಿವೃತ್ತಿಯಲ್ಲೂ ವಿವೇಕವಿಲ್ಲದೆ ಇರುವನೊ.
[೩] ಕೌಶಲವಿಲ್ಲದ ಬುದ್ಧಿಯೆಂಬ ಸಾರಥಿಯ.
[೪] ಪಳಗಿಸದ.]

**ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ।**
**ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ ೬ ॥**

ಯಃ ತು=ಯಾವನು ಸದಾ=ಯಾವಾಗಲೂ ಯುಕ್ತೇನ=ಯುಕ್ತವಾದ ಮನಸಾ=ಮನಸ್ಸಿನಿಂದ ವಿಜ್ಞಾನವಾನ್ ಭವತಿ=ನಿಪುಣನಾಗಿರುವನೊ ತಸ್ಯ= ಅವನ ಇಂದ್ರಿಯಾಣಿ=ಇಂದ್ರಿಯಗಳು ಸಾರಥೇಃ=ಸಾರಥಿಯ ಸದಶ್ವಾಃ ಇವ= ಒಳ್ಳೆಯ ಕುದುರೆಗಳಂತೆ ವಶ್ಯಾನಿ=ವಶವಾಗಿರುವುವು.

೬. ಯಾವನು ಯಾವಾಗಲೂ ಯುಕ್ತವಾದ ಮನಸ್ಸಿನಿಂದ ಕೂಡಿದವನಾಗಿ ನಿಪುಣನಾಗಿರುವನೊ[೧] ಅವನ ಇಂದ್ರಿಯಗಳು ಸಾರಥಿಯ ಒಳ್ಳೆಯ[೨] ಕುದುರೆಗಳಂತೆ ವಶವಾಗಿರುವುವು.

[[೧] ಸಮಾಹಿತಚಿತ್ತನಾಗಿರುವನೊ.
[೨] ಪಳಗಿದ.]

**ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಶುಚಿಃ।**
**ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ ೭ ॥**

ಯಃ ತು=ಯಾವನು ಸದಾ=ಯಾವಾಗಲೂ ಅವಿಜ್ಞಾನವಾನ್=ಜ್ಞಾನವಿಲ್ಲದವನಾಗಿ ಅಮನಸ್ಕಃ=ನಿಗ್ರಹಿಸದ ಮನಸ್ಸುಳ್ಳವನಾಗಿ ಅಶುಚಿಃ ಭವತಿ=ಅಶುಚಿಯಾಗಿರುವನೊ ಸಃ=ಅವನು ತತ್ ಪದಂ=ಆ ಪದವನ್ನು ನ ಆಪ್ನೋತಿ=ಹೊಂದುವುದಿಲ್ಲ, ಚ=ಮತ್ತು ಸಂಸಾರಂ=ಸಂಸಾರವನ್ನು ಅಧಿಗಚ್ಛತಿ=ಹೊಂದುತ್ತಾನೆ.

೭. ಯಾವನು ಯಾವಾಗಲೂ ಜ್ಞಾನವಿಲ್ಲದವನಾಗಿ, ನಿಗ್ರಹಿಸದ ಮನಸ್ಸುಳ್ಳವನಾಗಿ, ಅಶುಚಿಯಾಗಿರುವನೊ ಅವನು ಆ ಪದವನ್ನು[೧] ಹೊಂದುವುದಿಲ್ಲ, ಸಂಸಾರವನ್ನು[೨] ಹೊಂದುತ್ತಾನೆ.

[[೧] ನಾಶರಹಿತವಾದ ಪರಮಪದ.
[೨] ಜನ್ಮಮರಣರೂಪವಾದ.]

**ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।**
**ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೮ ॥**

**ಯಃ ತು**=ಯಾವನು **ಸದಾ**= ಯಾವಾಗಲೂ **ಜ್ಞಾನವಾನ್**= ಜ್ಞಾನವುಳ್ಳವನಾಗಿ **ಸಮನಸ್ಕಃ**=ನಿಗ್ರಹಿಸಿದ ಮನಸ್ಸುಳ್ಳವನಾಗಿ **ಶುಚಿಃ ಭವತಿ**= ಶುಚಿಯಾಗಿರುವನೊ **ಸಃ ತು**=ಅವನು **ತತ್ ಪದಂ**=ಆ ಪದವನ್ನು **ಆಪ್ನೋತಿ**= ಹೊಂದುತ್ತಾನೆ, **ಯಸ್ಮಾತ್**= ಯಾವುದರಿಂದ **ಭೂಯಃ**= ಪುನಃ **ನ ಜಾಯತೇ**= ಹುಟ್ಟುವುದಿಲ್ಲ.

೮. ಯಾವನು ಯಾವಾಗಲೂ ಜ್ಞಾನವುಳ್ಳವನಾಗಿ, ನಿಗ್ರಹಿಸಿದ ಮನಸ್ಸುಳ್ಳವನಾಗಿ ಶುಚಿಯಾಗಿರುವನೊ[೧] ಅವನು ಆ ಪದವನ್ನು ಹೊಂದುತ್ತಾನೆ; ಅದರಿಂದ[೨] ಪುನಃ ಹುಟ್ಟುವುದಿಲ್ಲ.

[[೧] ಮನಸ್ಸನ್ನು ನಿಗ್ರಹಿಸಿದ ಕಾರಣದಿಂದ ಯಾವಾಗಲೂ ಶುಚಿಯಾಗಿರುತ್ತಾನೆ.
[೨] ಹೊಂದಿದ ಪದದಿಂದ.]

**ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ ೯ ॥**

**ಯಃ ತು ನರಃ** = ಯಾವ ಮನುಷ್ಯನು **ವಿಜ್ಞಾನಸಾರಥಿಃ** = ವಿಜ್ಞಾನವೆಂಬ ಸಾರಥಿಯುಳ್ಳವನೊ **ಮನಃಪ್ರಗ್ರಹವಾನ್** = ಮನಸ್ಸೆಂಬ ಕಡಿವಾಣವನ್ನು ಹಿಡಿದಿರುವವನೊ **ಸಃ** = ಅವನು **ಅಧ್ವನಃ** = ಸಂಸಾರಗತಿಯ **ಪಾರಂ** = ಕೊನೆಯನ್ನು **ಆಪ್ನೋತಿ** = ಹೊಂದುತ್ತಾನೆ; **ತತ್** = ಅದು **ವಿಷ್ಣೋಃ** = ವಿಷ್ಣುವಿನ **ಪರಮಂ ಪದಂ** = ಪರಮಪದವು.

೯. ಯಾವ ಮನುಷ್ಯನು ವಿಜ್ಞಾನವೆಂಬ ಸಾರಥಿಯುಳ್ಳವನೊ, ಮನಸ್ಸೆಂಬ ಕಡಿವಾಣವನ್ನು ಹಿಡಿದಿರುವನೊ ಅವನು ಸಂಸಾರಗತಿಯ ಕೊನೆಯನ್ನು ಹೊಂದುತ್ತಾನೆ; ಅದೇ ವಿಷ್ಣುವಿನ ಪರಮಪದ.

**ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ ೧೦ ॥**

**ಇಂದ್ರಿಯೇಭ್ಯಃ ಹಿ**=ಇಂದ್ರಿಯಗಳಿಗಿಂತ **ಅರ್ಥಾಃ**=ವಿಷಯಗಳು **ಪರಾಃ**=ಶ್ರೇಷ್ಠವಾದುವು; **ಅರ್ಥೇಭ್ಯಃ ಚ**=ವಿಷಯಗಳಿಗಿಂತ **ಮನಃ**=ಮನಸ್ಸು **ಪರಂ**=ಶ್ರೇಷ್ಠವಾದುದು; **ಮನಸಃ ತು**=ಮನಸ್ಸಿಗಿಂತ **ಬುದ್ಧಿಃ**=ಬುದ್ಧಿಯು **ಪರಾ**=ಶ್ರೇಷ್ಠವಾದುದು; **ಬುದ್ಧೇಃ**=ಬುದ್ಧಿಗಿಂತ **ಮಹಾನ್ ಆತ್ಮಾ**=ಮಹತ್ ಎಂಬ ಆತ್ಮನು **ಪರಃ**=ಶ್ರೇಷ್ಠನು.

೧೦. ಇಂದ್ರಿಯಗಳಿಗಿಂತ ವಿಷಯಗಳು ಶ್ರೇಷ್ಠವಾದುವು, ವಿಷಯಗಳಿಗಿಂತ ಮನಸ್ಸು ಶೇಷ್ಠವಾದುದು, ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವಾದುದು, ಬುದ್ಧಿಗಿಂತ ಮಹತ್ ಎಂಬ ಆತ್ಮನು[೧] ಶ್ರೇಷ್ಠನು.

[[೧] ಸರ್ವಪ್ರಾಣಿಗಳ ಬುದ್ಧಿಗಳಿಗೂ ಪ್ರತ್ಯಗಾತ್ಮನಾದುದರಿಂದ 'ಆತ್ಮನು'; ಎಲ್ಲಕ್ಕಿಂತಲೂ ದೊಡ್ಡದಾಗಿರುವುದರಿಂದ ಮಹತ್; ಎಂದರೆ ಅವ್ಯಕ್ತದಿಂದ ಮೊದಲು ಹುಟ್ಟಿದ ಹೈರಣ್ಯಗರ್ಭತತ್ತ್ವ.]

**ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥ ೧೧ ॥**

**ಮಹತಃ**=ಮಹತ್ತಿಗಿಂತ **ಅವ್ಯಕ್ತಂ**=ಅವ್ಯಕ್ತವು **ಪರಂ**=ಶ್ರೇಷ್ಠವಾದುದು; **ಅವ್ಯಕ್ತಾತ್**=ಅವ್ಯಕ್ತಕ್ಕಿಂತ **ಪುರುಷಃ**=ಪುರುಷನು **ಪರಃ**=ಶ್ರೇಷ್ಠನು; **ಪುರುಷಾತ್**=ಪುರುಷನಿಗಿಂತ **ಪರಂ**=ಶ್ರೇಷ್ಠವಾದುದು **ಕಿಂಚಿತ್**=ಯಾವುವೂ **ನ**=ಇಲ್ಲ; **ಸಾ**=ಅದು **ಕಾಷ್ಠಾ**=ಕೊನೆ; **ಸಾ**=ಅದು **ಪರಾ**=ಶ್ರೇಷ್ಠವಾದ **ಗತಿಃ**=ಗತಿ.

೧೧. ಮಹತ್ತಿಗಿಂತ ಅವ್ಯಕ್ತವು[೧] ಶ್ರೇಷ್ಠವಾದುದು, ಅವ್ಯಕ್ತಕ್ಕಿಂತ ಪುರುಷನು[೨] ಶ್ರೇಷ್ಠನು, ಪುರುಷನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ; ಅದೇ ಕೊನೆ, ಅದೇ ಶ್ರೇಷ್ಠವಾದ ಗತಿ.

[[೧] ಜಗತ್ತಿಗೆಲ್ಲ ಕಾರಣವಾಗಿರುವ ಮತ್ತು ನಾಮರೂಪಗಳು ವ್ಯಕ್ತವಾಗದಿರುವ ತತ್ತ್ವ. ಇದು ಎಲ್ಲ ಕಾರ್ಯಕಾರಣಗಳ ಶಕ್ತಿಯು ಒಟ್ಟುಗೂಡಿದ ರೂಪ. ಇದಕ್ಕೆ ಅವ್ಯಕ್ತ ಅವ್ಯಾಕೃತ ಆಕಾಶ ಮೊದಲಾದ ಹೆಸರುಗಳುಂಟು.
[೨] ಚಿನ್ಮಾತ್ರಘನನಾದ ಆತ್ಮನು.]

**ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ ।**
**ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ ೧೨ ॥**

**ಸರ್ವೇಷು**=ಎಲ್ಲ **ಭೂತೇಷು**=ಪ್ರಾಣಿಗಳಲ್ಲಿ **ಗೂಢಃ**=ಗೂಢನಾಗಿರುವ **ಏಷಃ**=ಈ **ಆತ್ಮಾ**=ಆತ್ಮನು **ನ ಪ್ರಕಾಶತೇ**=ಪ್ರಕಾಶಿಸುವುದಿಲ್ಲ; **ತು**=ಆದರೆ **ಅಗ್ರ್ಯಯಾ**=ಏಕಾಗ್ರವಾದ **ಸೂಕ್ಷ್ಮಯಾ**=ಸೂಕ್ಷ್ಮವಾದ **ಬುದ್ಧ್ಯಾ**=ಬುದ್ಧಿಯ ಮೂಲಕ **ಸೂಕ್ಷ್ಮದರ್ಶಿಭಿಃ**=ಸೂಕ್ಷ್ಮದರ್ಶಿಗಳಿಂದ **ದೃಶ್ಯತೇ**=ನೋಡಲ್ಪಡುತ್ತಾನೆ.

**೧೨.** ಎಲ್ಲ ಪ್ರಾಣಿಗಳಲ್ಲಿಯೂ ಗೂಢನಾಗಿರುವ ಈ ಆತ್ಮನು ಪ್ರಕಾಶಿಸುವುದಿಲ್ಲ; ಆದರೆ ಸೂಕ್ಷ್ಮದರ್ಶಿಗಳು ಏಕಾಗ್ರವಾದ ಸೂಕ್ಷ್ಮವಾದ ಬುದ್ಧಿಯಿಂದ (ಅತ್ಮನನ್ನು) ನೋಡುತ್ತಾರೆ.

**ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ ।**
**ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾಂತ**
**ಆತ್ಮನಿ ॥ ೧೩ ॥**

**ಪ್ರಾಜ್ಞಃ**=ವಿವೇಕಿಯು **ವಾಕ್ [ವಾಚಂ]**=ವಾಕ್ಕನ್ನು **ಮನಸೀ**=ಮನಸ್ಸಿನಲ್ಲಿ **ಯಚ್ಛೇತ್**=ಲಯಮಾಡಿಕೊಳ್ಳಬೇಕು; **ತತ್**=ಅದನ್ನು **ಜ್ಞಾನೇ ಆತ್ಮನಿ**=ಪ್ರಕಾಶ ಸ್ವರೂಪವಾದ ಬುದ್ಧಿಯಲ್ಲಿ **ಯಚ್ಛೇತ್**=ಲಯಮಾಡಿಕೊಳ್ಳಬೇಕು; **ಜ್ಞಾನಂ**=ಬುದ್ಧಿಯನ್ನು **ಮಹತಿ ಆತ್ಮನಿ**=ಮಹತ್ ಆತ್ಮನಲ್ಲಿ **ನಿಯಚ್ಛೇತ್**=ಲಯ ಮಾಡಿಕೊಳ್ಳಬೇಕು; **ತತ್**=ಅದನ್ನು **ಶಾಂತೇ ಆತ್ಮನಿ**=ಶಾಂತನಾದ ಆತ್ಮನಲ್ಲಿ **ಯಚ್ಛೇತ್**=ಲಯಗೊಳಿಸಬೇಕು.

**೧೩.** ವಿವೇಕಿಯು ವಾಕ್ಕನ್ನು ಮನಸ್ಸಿನಲ್ಲಿ ಲಯಮಾಡಿಕೊಳ್ಳಬೇಕು; ಮನಸ್ಸನ್ನು ಪ್ರಕಾಶಸ್ವರೂಪವಾದ ಬುದ್ಧಿಯಲ್ಲಿ ಲಯಮಾಡಿಕೊಳ್ಳಬೇಕು, ಬುದ್ಧಿಯನ್ನು ಮಹತ್ ಆತ್ಮನಲ್ಲಿ[೧] ಲಯಮಾಡಿಕೊಳ್ಳಬೇಕು; ಮಹತ್ ಆತ್ಮನನ್ನು ಶಾಂತನಾದ ಆತ್ಮನಲ್ಲಿ[೨] ಲಯಮಾಡಿಕೊಳ್ಳಬೇಕು.

[ಆತ್ಮನನ್ನು ಅರಿಯುವುದಕ್ಕೆ ಸಾಧನವನ್ನು ಇಲ್ಲಿ ಹೇಳಿದೆ.

[೧] ಹಿರಣ್ಯಗರ್ಭಬುದ್ಧಿಯಲ್ಲಿ; ಎಂದರೆ ಹಿರಣ್ಯಗರ್ಭಬುದ್ಧಿಯಂತೆ ತನ್ನ ಬುದ್ಧಿಯನ್ನು ಸ್ವಚ್ಛವಾಗಿ ಮಾಡಿಕೊಳ್ಳಬೇಕು.

[೨] ಸರ್ವವಿಶೇಷಗಳೂ ಪ್ರತ್ಯಸ್ತವಾದ ಸ್ವರೂಪವುಳ್ಳ, ಅವಿಕ್ರಿಯವಾದ, ಸರ್ವಾಂತರವಾದ, ಸರ್ವಬುದ್ಧಿಪ್ರತ್ಯಯಗಳಿಗೂ ಸಾಕ್ಷಿಯಾದ ಮುಖ್ಯನಾದ ಆತ್ಮನಲ್ಲಿ.]

**ಉತ್ತಿಷ್ಠತ ಜಾಗ್ರತ**
**ಪ್ರಾಪ್ಯ ವರಾನ್ ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ**
**ದುರ್ಗಂ ಪಥಸ್ತತ್ ಕವಯೋ ವದಂತಿ ॥ ೧೪ ॥**

**ಉತ್ತಿಷ್ಠತ** = ಏಳಿರಿ, **ಜಾಗ್ರತ** = ಎಚ್ಚರಗೊಳ್ಳಿರಿ, **ವರಾನ್** = ಶ್ರೇಷ್ಠರಾದ ಆಚಾರ್ಯರನ್ನು **ಪ್ರಾಪ್ಯ** = ಹೊಂದಿ **ನಿಬೋಧತ** = ತಿಳಿದುಕೊಳ್ಳಿರಿ; **ಕ್ಷುರಸ್ಯ** = ಕ್ಷೌರದ ಕತ್ತಿಯ **ನಿಶಿತಾ**=ಹರಿತವಾದ **ಧಾರಾ** = ಅಲಗು **ದುರತ್ಯಯಾ** = ದಾಟಲು ಕಷ್ಟವಾದದ್ದು; [**ತದ್ವತ್**=ಹಾಗೆಯೇ] **ತತ್**=ಆ **ಪಥಃ** [**ಪಂಥಾನಂ**]=ಪಥವನ್ನು **ದುರ್ಗಂ**=ದುರ್ಗಮವೆಂದು **ಕವಯಃ**=ಜ್ಞಾನಿಗಳು **ವದಂತಿ**=ಹೇಳುತ್ತಾರೆ.

**೧೪.** ಏಳಿರಿ,[೧] ಎಚ್ಚರಗೊಳ್ಳಿರಿ,[೨] ಶ್ರೇಷ್ಠರಾದ ಆಚಾರ್ಯರನ್ನು ಹೊಂದಿ ತಿಳಿದುಕೊಳ್ಳಿರಿ,[೩] ಹರಿತವಾದ ಕತ್ತಿಯ ಅಲಗು ದಾಟಲು ಕಷ್ಟವಾಗಿರುವಂತೆ ಆ ಪಥವು ದುರ್ಗಮವೆಂದು[೪] ಜ್ಞಾನಿಗಳು ಹೇಳುತ್ತಾರೆ.

[[೧] 'ಅನಾದ್ಯವಿದ್ಯೆಯಿಂದ ಸುಪ್ತರಾದ ಎಲೈ ಜೀವರೆ, ಅವನ ದರ್ಶನಕ್ಕಾಗಿ ಆತ್ಮಜ್ಞಾನಾಭಿಮುಖರಾಗಿ.'

[೨] 'ಸರ್ವಾನರ್ಥಗಳಿಗೂ ಕಾರಣವಾಗಿರುವ ಘೋರ ರೂಪವಾದ ಅಜ್ಞಾನನಿದ್ರೆಯನ್ನು ನಾಶಮಾಡಿಕೊಳ್ಳಿರಿ.'

[೩] ಆಚಾರ್ಯನಿಂದ ಉಪದೇಶಿಸಲ್ಪಟ್ಟ ಸರ್ವಾಂತರನಾದ ಆತ್ಮನು 'ಅಹಂ ಅಸ್ಮಿ' ಎಂದು ತಿಳಿದುಕೊಳ್ಳಿರಿ.

[೪] ಜ್ಞೇಯವು ಅತಿಸೂಕ್ಷ್ಮವಾಗಿರುವುದರಿಂದ ಅದರ ವಿಷಯವಾದ ಜ್ಞಾನಮಾರ್ಗವು ದುಃಸಂಪಾದ್ಯವು ಎಂದು ಅಭಿಪ್ರಾಯ.]

**ಅಶಬ್ದಮಸ್ಪರ್ಶಮರೂಪಮವ್ಯಯಂ**
**ತಥಾರಸಂ ನಿತ್ಯಮಗಂಧವಚ್ಚ ಯತ್ ।**
**ಅನಾದ್ಯನಂತಂ ಮಹತಃ ಪರಂ ಧ್ರುವಂ**
**ನಿಚಾಯ್ಯ ತನ್ಮೃತ್ಯುಮುಖಾತ್ ಪ್ರಮುಚ್ಯತೇ ॥ ೧೫ ॥**

**ಯತ್**=ಯಾವುದು **ಅಶಬ್ದಂ**=ಶಬ್ದರಹಿತವೊ **ಅಸ್ಪರ್ಶಂ**=ಸ್ಪರ್ಶರಹಿತವೊ **ಅರೂಪಂ** = ರೂಪರಹಿತವೊ **ಅರಸಂ** = ರಸರಹಿತವೊ **ತಥಾ ಅಗಂಧವತ್ ಚ** = ಹಾಗೆಯೇ ಗಂಧರಹಿತವೊ **ಅವ್ಯಯಂ** = ಅವ್ಯಯವೊ **ನಿತ್ಯಂ** = ನಿತ್ಯವೊ **ಅನಾದಿ**= ಅನಾದಿಯೊ **ಅನಂತಂ** = ಅನಂತವೊ **ಮಹತಃ ಪರಂ** = ಬುದ್ಧಿ ಎಂಬ ಮಹತ್ತತ್ತ್ವಕ್ಕಿಂತ ವಿಲಕ್ಷಣವಾಗಿರುವುದೊ **ಧ್ರುವಂ** = ಧ್ರುವವಾಗಿರುವುದೊ **ತತ್** = ಅದನ್ನು **ನಿಚಾಯ್ಯ**=ಅರಿತುಕೊಂಡು **ಮೃತ್ಯುಮುಖಾತ್**=ಮೃತ್ಯುಮುಖದಿಂದ **ಪ್ರಮುಚ್ಯತೇ**=ವಿಮುಕ್ತನಾಗುತ್ತಾನೆ.

**೧೫.** ಶಬ್ದ ಸ್ಪರ್ಶ ರೂಪ ರಸ ಗಂಧ—ಇವುಗಳಿಲ್ಲದ, ಅವ್ಯಯವೂ[೧] ನಿತ್ಯವೂ ಅನಾದಿಯೂ[೨] ಅನಂತವೂ ಆದ, ಬುದ್ಧಿಯೆಂಬ ಮಹತ್ತತ್ತ್ವಕ್ಕಿಂತ

ವಿಲಕ್ಷಣವಾದ,[೩] ಧ್ರುವವಾದ[೪] ಬ್ರಹ್ಮವನ್ನು ಅರಿತುಕೊಂಡು[೫] ಮೃತ್ಯು ಮುಖದಿಂದ[೬] ವಿಮುಕ್ತನಾಗುತ್ತಾನೆ.

[ಜ್ಞೇಯವಾದ ಬ್ರಹ್ಮವು ಹೇಗೆ ಸೂಕ್ಷ್ಮವಾಗಿದೆಯೆಂದು ಇಲ್ಲಿ ಹೇಳಿದೆ.
[೧] ಇದರಲ್ಲಿ ಶಬ್ದಾದಿಗಳು ಇಲ್ಲದಿರುವುದರಿಂದ ವ್ಯಯವಿಲ್ಲ.
[೨] ಕಾರಣರಹಿತವಾದದ್ದು ಅನಾದಿ.
[೩] ನಿತ್ಯಜ್ಞಾನಸ್ವರೂಪವುಳ್ಳದ್ದು.
[೪] ಕೂಟಸ್ಥನಿತ್ಯವಾದ.
[೫] ಬ್ರಹ್ಮವನ್ನು ತನ್ನ ಆತ್ಮನೆಂದೇ ಅರಿತುಕೊಂಡು.
[೬] ಮೃತ್ಯುಗೋಚರವಾದ ಅವಿದ್ಯಾಕಾಮಕರ್ಮಗಳಿಂದ.]

**ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ ।**
**ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ**
**ಮಹೀಯತೇ ॥ ೧೬ ॥**

**ಮೃತ್ಯುಪ್ರೋಕ್ತಂ** = ಮೃತ್ಯುವಿನಿಂದ ಹೇಳಲ್ಪಟ್ಟ **ಸನಾತನಂ** = ಸನಾತನವಾದ **ನಾಚಿಕೇತಂ ಉಪಾಖ್ಯಾನಂ** = ನಾಚಿಕೇತೋಪಾಖ್ಯಾನವನ್ನು **ಉಕ್ತ್ವಾ** = ಹೇಳಿ **ಶ್ರುತ್ವಾ ಚ**=ಮತ್ತು ಕೇಳಿ **ಮೇಧಾವೀ** = ಮೇಧಾವಿಯು **ಬ್ರಹ್ಮಲೋಕೇ** = ಬ್ರಹ್ಮ ಲೋಕದಲ್ಲಿ **ಮಹೀಯತೇ** = ಪೂಜ್ಯನಾಗುತ್ತಾನೆ.

೧೬. ಮೃತ್ಯುವಿನಿಂದ ಹೇಳಲ್ಪಟ್ಟ ಸನಾತನವಾದ[೧] ನಾಚಿಕೇತೋಪಾಖ್ಯಾನವನ್ನು[೨] ಹೇಳಿ ಮತ್ತು ಕೇಳಿ ಮೇಧಾವಿಯು ಬ್ರಹ್ಮಲೋಕದಲ್ಲಿ[೩] ಪೂಜ್ಯನಾಗುತ್ತಾನೆ.

[[೧] ವೈದಿಕವಾದುದರಿಂದ.
[೨] ವಲ್ಲೀತ್ರಯರೂಪವಾದ.
[೩] ಬ್ರಹ್ಮವೆಂಬ ಲೋಕದಲ್ಲಿ.]

**ಯ ಇಮಂ ಪರಮಂ ಗುಹ್ಯಂ ಶ್ರಾವಯೇದ್ಬ್ರಹ್ಮಸಂಸದಿ ।**
**ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ ॥**
**ತದಾನಂತ್ಯಾಯ ಕಲ್ಪತ ಇತಿ ॥ ೧೭ ॥**

**ಯಃ** = ಯಾವನು **ಇಮಂ** = ಈ **ಪರಮಂ ಗುಹ್ಯಂ** = ಪರಮರಹಸ್ಯವನ್ನು **ಬ್ರಹ್ಮಸಂಸದಿ** = ಬ್ರಾಹ್ಮಣಸಭೆಯಲ್ಲಿ **ಶ್ರಾದ್ಧಕಾಲೇ ವಾ** = ಅಥವಾ ಶ್ರಾದ್ಧಕಾಲದಲ್ಲಿ **ಪ್ರಯತಃ**=ಶುಚಿರ್ಭೂತನಾಗಿ **ಶ್ರಾವಯೇತ್**=ಶ್ರವಣಮಾಡಿಸುತ್ತಾನೆಯೊ **ತತ್**

**ಆನಂತ್ಯಾಯ**=ಅದು ಅನಂತಫಲವನ್ನು ಕೊಡಲು **ಕಲ್ಪತೇ**=ಸಮರ್ಥವಾಗುತ್ತದೆ. **ತತ್ ಆನಂತ್ಯಾಯ ಕಲ್ಪತೇ ಇತಿ**=ಅದು ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ.

೧೭. ಯಾವನು ಈ ಪರಮರಹಸ್ಯವನ್ನು ಬ್ರಾಹ್ಮಣರ ಸಭೆಯಲ್ಲಿ ಅಥವಾ ಶ್ರಾದ್ಧಕಾಲದಲ್ಲಿ ಶುಚಿರ್ಭೂತನಾಗಿ ಶ್ರವಣಮಾಡಿಸುತ್ತಾನೆಯೊ[೧] ಅದು[೨] ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ, ಅದು ಅನಂತ ಫಲವನ್ನು ಕೊಡಲು ಸಮರ್ಥವಾಗುತ್ತದೆ.

[[೧] ಭೋಜನಮಾಡುತ್ತಿರುವ ಬ್ರಾಹ್ಮಣರಿಗೆ ಗ್ರಂಥದಿಂದಲೂ ಅರ್ಥದಿಂದಲೂ ಶ್ರವಣಮಾಡಿಸುತ್ತಾನೆಯೊ.

[೨] ಆ ಶ್ರಾದ್ಧವು.]

# ಎರಡನೆಯ ಅಧ್ಯಾಯ

## ನಾಲ್ಕನೆಯ ವಲ್ಲೀ

**ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂ-**
**ಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನವೈಕ್ಷ-**
**ದಾವೃತ್ತಚಕ್ಷುರಮೃತತ್ವಮಿಚ್ಛನ್ ॥ ೧ ॥**

**ಸ್ವಯಂಭೂಃ** = ಸ್ವಯಂಭುವು **ಪರಾಂಚಿ** = ಬಹಿರ್ಮುಖವಾದ **ಖಾನಿ** = ಇಂದ್ರಿಯಗಳನ್ನು **ವ್ಯತೃಣತ್** = ಹಿಂಸೆಮಾಡಿರುತ್ತಾನೆ; **ತಸ್ಮಾತ್** = ಆದುದರಿಂದ **ಪರಾಙ್**=ಹೊರಗಡೆ **ಪಶ್ಯತಿ**=ನೋಡುತ್ತಾನೆ, **ಅಂತರಾತ್ಮನ್** [ಅಂತರಾತ್ಮಾನಂ]= ಅಂತರಾತ್ಮನನ್ನು **ನ** = ನೋಡುವುದಿಲ್ಲ. **ಕಶ್ಚಿತ್ ಧೀರಃ** = ಯಾವನೊ ಒಬ್ಬ ವಿವೇಕಿಯು **ಅಮೃತತ್ವಂ** = ಅಮೃತತ್ವವನ್ನು **ಇಚ್ಛನ್**=ಬಯಸುತ್ತ **ಆವೃತ್ತಚಕ್ಷುಃ**= ಚಕ್ಷುಸ್ಸನ್ನು ಹಿಂತಿರುಗಿಸಿದವನಾಗಿ **ಪ್ರತ್ಯಗಾತ್ಮಾನಂ** = ಪ್ರತ್ಯಗಾತ್ಮನನ್ನು **ಐಕ್ಷತ್** [**ಪಶ್ಯತಿ**] = ನೋಡುತ್ತಾನೆ.

೧. ಸ್ವಯಂಭುವು[೧] ಬಹಿರ್ಮುಖವಾದ ಇಂದ್ರಿಯಗಳನ್ನು ಹಿಂಸೆ ಮಾಡಿರುತ್ತಾನೆ;[೨] ಆದುದರಿಂದ (ಮನುಷ್ಯನು) ಹೊರಗಡೆ ನೋಡುತ್ತಾನೆ, ಅಂತರಾತ್ಮನನ್ನು ನೋಡುವುದಿಲ್ಲ. ಯಾವನೊ ಒಬ್ಬ ವಿವೇಕಿಯು ಅಮೃತತ್ವವನ್ನು ಬಯಸುತ್ತ, ಚಕ್ಷುಸ್ಸನ್ನು[೩] ಹಿಂತಿರುಗಿಸಿ ಪ್ರತ್ಯಗಾತ್ಮನನ್ನು ನೋಡುತ್ತಾನೆ.

[ಹಿಂದೆ 'ಎಲ್ಲ ಪ್ರಾಣಿಗಳಲ್ಲಿಯೂ ಗೂಢನಾಗಿರುವ ಈ ಆತ್ಮನು ಪ್ರಕಾಶಿಸುವುದಿಲ್ಲ, ಆದರೆ ಸೂಕ್ಷ್ಮದರ್ಶಿಗಳು ಅಗ್ರ್ಯವಾದ ಬುದ್ಧಿಯಿಂದ ನೋಡುತ್ತಾರೆ' (೧, ೩, ೧೨) ಎಂದು ಹೇಳಿದೆ. ಈ ಅಗ್ರ್ಯವಾದ ಬುದ್ಧಿಯುಂಟಾಗಲು ಯಾವ ಪ್ರತಿಬಂಧವುಂಟು? ಆತ್ಮದರ್ಶನಕ್ಕೆ ಅಡ್ಡಿಯಾಗಿರುವ ಕಾರಣವನ್ನು ತೋರಿಸುವುದಕ್ಕಾಗಿ ಈ ವಲ್ಲಿಯು ಪ್ರಾರಂಭವಾಗಿದೆ.

[೧] ಪರಮೇಶ್ವರನು.

[೨] ಇಂದ್ರಿಯಗಳು ಹೊರಗೇ ಹೋಗುವಂತೆ ಮಾಡಿರುತ್ತಾನೆ.

[೩] ಇಂದ್ರಿಯಸಮೂಹವನ್ನು.]

**ಪರಾಚಃ ಕಾಮಾನನುಯಂತಿ ಬಾಲಾ-**
**ಸ್ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।**
**ಅಥ ಧೀರಾ ಅಮೃತತ್ವಂ ವಿದಿತ್ವಾ**
**ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥ ೨ ॥**

**ಬಾಲಾಃ** = ಮಕ್ಕಳು **ಪರಾಚಃ** = ಹೊರಗಿರುವ **ಕಾಮಾನ್** = ಕಾಮಗಳನ್ನು **ಅನುಯಂತಿ** = ಅನುಸರಿಸುತ್ತಾರೆ. **ತೇ** = ಅವರು **ವಿತತಸ್ಯ** = ಸರ್ವವ್ಯಾಪಿಯಾದ **ಮೃತ್ಯೋಃ** = ಮೃತ್ಯುವಿನ **ಪಾಶಂ** = ಪಾಶವನ್ನು **ಯಂತಿ** = ಹೊಂದುತ್ತಾರೆ. **ಅಥ** = ಆದುದರಿಂದ **ಧೀರಾಃ**=ವಿವೇಕಿಗಳು **ಅಧ್ರುವೇಷು**=ಅನಿತ್ಯವಸ್ತುಗಳಲ್ಲಿ **ಧ್ರುವಂ**= ಕೂಟಸ್ಥವಾದ **ಅಮೃತತ್ವಂ**= ಅಮೃತತ್ವವನ್ನು **ವಿದಿತ್ವಾ**=ತಿಳಿದುಕೊಂಡು **ಇಹ**= ಇಲ್ಲಿ **ನ ಪ್ರಾರ್ಥಯಂತೇ** = ಬಯಸುವುದಿಲ್ಲ.

**೨.** ಮಕ್ಕಳು[೧] ಹೊರಗಿರುವ ಕಾಮಗಳನ್ನು ಅನುಸರಿಸುತ್ತಾರೆ. ಅವರು ಸರ್ವವ್ಯಾಪಿಯಾದ ಮೃತ್ಯುವಿನ ಪಾಶವನ್ನು[೨] ಹೊಂದುತ್ತಾರೆ. ಆದುದರಿಂದ ವಿವೇಕಿಗಳು ಅನಿತ್ಯವಸ್ತುಗಳಲ್ಲಿ ಕೂಟಸ್ಥವಾದ ಅಮೃತತ್ವ ವನ್ನು ತಿಳಿದುಕೊಂಡು ಇಲ್ಲಿ (ಏನನ್ನೂ) ಬಯಸುವುದಿಲ್ಲ.[೩]

[[೧] ಅಲ್ಪಬುದ್ಧಿಯುಳ್ಳವರು.
[೨] ಅವಿದ್ಯಾಕಾಮಕರ್ಮಸಮುದಾಯದ.
[೩] ಪ್ರತ್ಯಗಾತ್ಮದರ್ಶನಕ್ಕೆ ಪ್ರತಿಕೂಲವಾಗಿರುವುದರಿಂದ ವಿಷಯತ್ರಯವನ್ನು ಬಿಡುತ್ತಾರೆ.]

**ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।**
**ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ॥ ಏತದ್ವೈ ತತ್ ॥ ೩ ॥**

**ಯೇನ**=ಯಾವ **ಏತೇನ ಏವ**=ಇದರಿಂದಲೇ **ರೂಪಂ**=ರೂಪವನ್ನೂ **ರಸಂ**= ರಸವನ್ನೂ **ಗಂಧಂ** = ಗಂಧವನ್ನೂ **ಶಬ್ದಾನ್** = ಶಬ್ದಗಳನ್ನೂ **ಸ್ಪರ್ಶಾನ್** = ಸ್ಪರ್ಶ ಗಳನ್ನೂ **ಮೈಥುನಾನ್ ಚ** = ಮೈಥುನಗಳನ್ನೂ **ವಿಜಾನಾತಿ** = ಅರಿಯುತ್ತಾನೆಯೊ [ಆ ಆತ್ಮನಿಗೆ] **ಅತ್ರ**=ಇಲ್ಲಿ **ಕಿಂ ಪರಿಶಿಷ್ಯತೇ**=ಏನು ಉಳಿಯುತ್ತದೆ? **ಏತತ್ ವೈ**= ಇದೇ **ತತ್**=ಅದು.

**೩.** ಯಾವ ಇದರಿಂದಲೇ[೧] ರೂಪವನ್ನೂ ರಸವನ್ನೂ ಗಂಧವನ್ನೂ ಶಬ್ದಗಳನ್ನೂ ಸ್ಪರ್ಶಗಳನ್ನೂ ಮೈಥುನಗಳನ್ನೂ ಅರಿಯುತ್ತಾನೆಯೊ (ಆ ಆತ್ಮನಿಗೆ) ಇಲ್ಲಿ[೨] ಏನು ಉಳಿಯುತ್ತದೆ?[೩] ಇದೇ ಅದು.[೪]

[೧ ವಿಜ್ಞಾನಸ್ವಭಾವವುಳ್ಳ ಆತ್ಮನಿಂದ.
೨ ಈ ಲೋಕದಲ್ಲಿ.
೩ ಏನೂ ಉಳಿದಿರುವುದಿಲ್ಲ; ಎಲ್ಲವನ್ನೂ ಆತ್ಮನು ಅರಿಯುತ್ತಾನೆ.
೪ ನಚಿಕೇತನು ಕೇಳಿದ, ದೇವತೆಗಳಿಗೂ ಕೂಡ ಸಂಶಯವನ್ನುಂಟುಮಾಡಿದ, ಧರ್ಮಾದಿಗಳಿಗಿಂತ ವಿಲಕ್ಷಣವಾದ ವಿಷ್ಣುವಿನ ಪರಮಪದ.]

**ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೪ ॥**

ಯೇನ= ಯಾವನಿಂದ ಸ್ವಪ್ನಾಂತಂ= ಸ್ವಪ್ನದಲ್ಲಿರುವುದನ್ನೂ ಜಾಗರಿತಾಂತಂ ಚ=ಜಾಗೃತಾವಸ್ಥೆಯಲ್ಲಿರುವುದನ್ನೂ ಉಭೌ=ಎರಡನ್ನೂ [ಲೋಕಃ=ಮನುಷ್ಯನು] ಅನುಪಶ್ಯತಿ = ನೋಡುತ್ತಾನೆಯೊ [ತಂ = ಆ] ಮಹಾಂತಂ = ಮಹಾನ್ ಆದ ವಿಭುಂ= ವಿಭುವಾದ ಆತ್ಮಾನಂ= ಆತ್ಮನನ್ನು ಮತ್ವಾ= ತಿಳಿದುಕೊಂಡು ಧೀರಃ= ವಿವೇಕಿಯು ನ ಶೋಚತಿ=ಶೋಕಿಸುವುದಿಲ್ಲ.

೪. ಯಾವನಿಂದ (ಮನುಷ್ಯನು) ಸ್ವಪ್ನದಲ್ಲಿರುವುದು೧ ಜಾಗೃತಾವಸ್ಥೆಯಲ್ಲಿರುವುದು೨ ಎಂಬ ಎರಡನ್ನೂ ನೋಡುತ್ತಾನೆಯೊ, ಆ ವಿಭುವಾದ ಮಹಾನ್ ಆತ್ಮನನ್ನು ತಿಳಿದುಕೊಂಡು ಧೀರನು ಶೋಕಿಸುವುದಿಲ್ಲ.

[೧ ಕನಸಿನಲ್ಲಿ ವಿಷಯವಾಗಿರುವುದು.
೨ ಜಾಗೃತಾವಸ್ಥೆಯಲ್ಲಿ ವಿಷಯವಾಗಿರುವುದು.]

**ಯ ಇಮಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈ ತತ್ ॥ ೫ ॥**

ಯಃ=ಯಾವನು ಇಮಂ=ಈ ಮಧ್ವದಂ=ಮಧುವನ್ನು ಸೇವಿಸುವ ಜೀವಂ= ಜೀವನನ್ನು ಭೂತಭವ್ಯಸ್ಯ= ಭೂತಭವಿಷ್ಯಗಳ ಈಶಾನಂ= ಒಡೆಯನಾದ ಅಂತಿಕಾತ್ = ಅತ್ಯಂತ ಸಮೀಪದಲ್ಲಿರುವ ಆತ್ಮಾನಂ = ಆತ್ಮನೆಂದು ವೇದ = ತಿಳಿಯುತ್ತಾನೆಯೊ [ಸಃ=ಅವನು] ತತಃ=ಅನಂತರ ನ ವಿಜುಗುಪ್ಸತೇ=ಕಾಪಾಡಿಕೊಳ್ಳಲು ಇಚ್ಛಿಸುವುದಿಲ್ಲ. ಏತತ್ ವೈ ತತ್= ಇದೇ ಅದು.

೫. ಯಾವನು ಮಧುವನ್ನು ಸೇವಿಸುವ೧ ಈ ಜೀವನನ್ನು೨ ಭೂತಭವಿಷ್ಯಗಳ೩ ಒಡೆಯನೂ, ಅತ್ಯಂತ ಸಮೀಪದಲ್ಲಿರುವವನೂ೪ ಆದ ಆತ್ಮ

ನೆಂದು ತಿಳಿದುಕೊಳ್ಳುತ್ತಾನೆಯೊ, (ಅವನು) ಅನಂತರ (ತನ್ನನ್ನು) ಕಾಪಾಡಿ ಕೊಳ್ಳಲು ಇಚ್ಛಿಸುವುದಿಲ್ಲ.[೫] ಇದೇ ಅದು.

[[೧] ಕರ್ಮಫಲವನ್ನು ಅನುಭವಿಸುತ್ತಿರುವ.
[೨] ಪ್ರಾಣಾದಿಗಳನ್ನು ಧರಿಸಿರುವವನನ್ನು.
[೩] ಕಾಲತ್ರಯುದ.
[೪] ಅಭೇದನಾದ.
[೫] ಏಕೆಂದರೆ ಅವನು ಅಭಯುವನ್ನು ಹೊಂದಿರುತ್ತಾನೆ.]



**ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ।**
**ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತ ॥**
**ಏತದ್ವೈ ತತ್ ॥ ೬ ॥**

ಯಃ=ಯಾವನು ಅದ್ಭ್ಯಃ=ನೀರಿಗಿಂತ ಪೂರ್ವಂ=ಮೊದಲು ತಪಸಃ=ತಪಸ್ಸಿನಿಂದ ಅಜಾಯತ=ಹುಟ್ಟಿರುತ್ತಾನೆಯೊ, ಗುಹಾಂ=ಹೃದಯುವನ್ನು ಪ್ರವಿಶ್ಯ=ಪ್ರವೇಶಿಸಿ ಭೂತೇಭಿಃ [ಭೂತೈಃ]=ಭೂತಗಳೊಂದಿಗೆ ತಿಷ್ಠಂತಂ=ಇರುವ [ತಂ=ಆ] ಪೂರ್ವಂ ಜಾತಂ=ಹಿರಣ್ಯಗರ್ಭನನ್ನು ಯಃ=ಯಾವನು ವ್ಯಪಶ್ಯತ=ನೋಡುತ್ತಾನೆಯೊ [ಸಃ=ಅವನು] ತತ್=ಆ, ಪೂರ್ವೋಕ್ತವಾದ ಏತತ್ ವೈ=ಬ್ರಹ್ಮವನ್ನೇ [ಪಶ್ಯತಿ=ನೋಡುತ್ತಾನೆ].

೬. ನೀರಿಗಿಂತ[೧] ಮೊದಲು ತಪಸ್ಸಿನಿಂದ[೨] ಹುಟ್ಟಿರುವ ಮತ್ತು ಹೃದಯುವನ್ನು[೩] ಪ್ರವೇಶಿಸಿ ಭೂತಗಳೊಂದಿಗೆ[೪] ಇರುವ[೫] ಆ ಹಿರಣ್ಯಗರ್ಭನನ್ನು ಯಾವನು[೬] ನೋಡುತ್ತಾನೆಯೊ ಅವನು ಪೂರ್ವೋಕ್ತವಾದ ಈ ಬ್ರಹ್ಮವನ್ನೇ ನೋಡುತ್ತಾನೆ.

[[೧] ಪಂಚಭೂತಗಳಿಗಿಂತ.
[೨] ಜ್ಞಾನಾದಿಲಕ್ಷಣಗಳುಳ್ಳ ಬ್ರಹ್ಮದಿಂದ.
[೩] ಸಮಸ್ತಪ್ರಾಣಿಗಳ ಹೃದಯಾಕಾಶ.
[೪] ದೇಹೇಂದ್ರಿಯುಗಳೊಂದಿಗೆ.
[೫] ಶಬ್ದಾದಿಗಳನ್ನು ಅರಿಯುತ್ತಿರುವ.
[೬] ಯಾವ ಮುಮುಕ್ಷುವು.]

**ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯಿೀ ।**
**ಗುಹಾಂ ಪ್ರವಿಶ್ಯ ತಿಷ್ಠಂತೀಂ ಯಾ ಭೂತೇಭಿರ್ವ್ಯಜಾಯತ ॥**
**ಏತದ್ವೈ ತತ್ ॥ ೭ ॥**

ಯಾ=ಯಾವ ದೇವತಾಮಯೀ=ದೇವತಾಮಯಿಯಾದ ಅದಿತಿಃ=ಅದಿತಿಯು ಪ್ರಾಣೇನ=ಹಿರಣ್ಯಗರ್ಭರೂಪದಲ್ಲಿ ಸಂಭವತಿ=ಅಭಿವ್ಯಕ್ತಳಾಗಿರುವಳೊ, ಯಾ=ಯಾವಳು ಭೂತೇಭಿಃ=ಭೂತಗಳೊಂದಿಗೆ ವ್ಯಜಾಯತ=ಉತ್ಪನ್ನಳಾಗಿರುವಳೊ, [ತಾಂ=ಆ] ಗುಹಾಂ ಪ್ರವಿಶ್ಯ ತಿಷ್ಠಂತೀಂ=ಹೃದಯವನ್ನು ಪ್ರವೇಶಿಸಿ ಇರುವವಳನ್ನು [ಯಾವನು ನೋಡುತ್ತಾನೆಯೊ ಅವನು] ತತ್ ಏತತ್ ವೈ [ಪಶ್ಯತಿ]=ಪೂರ್ವೋಕ್ತವಾದ ಬ್ರಹ್ಮವನ್ನೇ [ನೋಡುತ್ತಾನೆ].

೭. ದೇವತಾಮಯಿಯಾದ ಯಾವ ಅದಿತಿಯು[೧] ಹಿರಣ್ಯಗರ್ಭರೂಪದಲ್ಲಿ ಅಭಿವ್ಯಕ್ತಳಾಗಿರುವಳೊ,[೨] ಭೂತಗಳೊಂದಿಗೆ ಉತ್ಪನ್ನಳಾಗಿರುವಳೊ ಮತ್ತು ಹೃದಯವನ್ನು ಪ್ರವೇಶಿಸಿ ಇರುವಳೊ ಅವಳನ್ನು (ಯಾವನು ನೋಡುತ್ತಾನೆಯೊ ಅವನು) ಪೂರ್ವೋಕ್ತವಾದ ಈ ಬ್ರಹ್ಮವನ್ನೇ (ನೋಡುತ್ತಾನೆ).

[[೧] ಶಬ್ದಾದಿಗಳನ್ನು ತಿನ್ನುವುದರಿಂದ.
[೨] ಪರಬ್ರಹ್ಮದಿಂದ.]

ಅರಣ್ಯೋರ್ನಿಹಿತೋ ಜಾತವೇದಾ
ಗರ್ಭ ಇವ ಸುಭೃತೋ ಗರ್ಭಿಣೀಭಿಃ ।
ದಿವೇ ದಿವ ಈಡ್ಯೋ ಜಾಗೃವದ್ಭಿ-
ರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥ ಏತದ್ವೈ ತತ್ ॥ ೮ ॥

ಗರ್ಭಿಣೀಭಿಃ=ಗರ್ಭಿಣಿಯರಿಂದ ಗರ್ಭಃ ಇವ=ಗರ್ಭವು ಹೇಗೋ ಹಾಗೆ ಅರಣ್ಯೋಃ=ಎರಡು ಅರಣಿಗಳಲ್ಲಿ ನಿಹಿತಃ=ಇಡಲ್ಪಟ್ಟ ಸುಭೃತಃ=ಧರಿಸಲ್ಪಟ್ಟಿರುವ ಜಾತವೇದಾಃ ಅಗ್ನಿಃ=ಜಾತವೇದನೆಂಬ ಅಗ್ನಿಯು ಜಾಗೃವದ್ಭಿಃ=ಅಪ್ರಮತ್ತರಾದ ಹವಿಷ್ಮದ್ಭಿಃ=ಹವಿಷ್ಮಂತರಾದ ಮನುಷ್ಯೇಭಿಃ=ಮನುಷ್ಯರಿಂದ ದಿವೇ ದಿವೇ=ಪ್ರತಿದಿನವೂ ಈಡ್ಯಃ=ಸ್ತುತ್ಯನಾಗಿರುತ್ತಾನೆ. ಏತತ್ ವೈ ತತ್=ಈ ಅಗ್ನಿಯೇ ಆ ಬ್ರಹ್ಮ.

೮. ಗರ್ಭಿಣಿಯರಿಂದ ಗರ್ಭವು ಹೇಗೆ ಧರಿಸಲ್ಪಟ್ಟಿರುವುದೊ[೧] ಹಾಗೆ ಎರಡು[೨] ಅರಣಿಗಳಲ್ಲಿಯೂ ಇಡಲ್ಪಟ್ಟು ಧರಿಸಲ್ಪಟ್ಟಿರುವ[೩] ಜಾತವೇದನೆಂಬ ಅಗ್ನಿಯು ಅಪ್ರಮತ್ತರೂ ಹವಿಷ್ಮಂತರೂ[೪] ಆದ ಮನುಷ್ಯರಿಂದ[೫] ಪ್ರತಿದಿನವೂ ಸ್ತುತ್ಯನಾಗಿರುತ್ತಾನೆ. ಈ ಅಗ್ನಿಯೇ ಪ್ರಕೃತವಾದ ಬ್ರಹ್ಮ.

[[೧] ಶುದ್ಧವಾದ ಅನ್ನಭೋಜನಾದಿಗಳಿಂದ.
[೨] ಉತ್ತರಾರಣಿ, ಅಧರಾರಣಿ.

[2] ಋತ್ವಿಕ್ಕುಗಳಿಂದ ಮತ್ತು ಯೋಗಿಗಳಿಂದ.
[4] ಆಜ್ಯಾದಿಗಳನ್ನು ತರುವ ಮತ್ತು ಧ್ಯಾನಭಾವನೆಗಳಿಂದ ಕೂಡಿರುವ.
[5] ಕರ್ಮಿಗಳಿಂದ ಯೋಗಿಗಳಿಂದ.]

**ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।**
**ತಂ ದೇವಾಃ ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ ॥**
**ಏತದ್ವೈ ತತ್ ॥ ೯ ॥**

**ಯತಃ ಚ**=ಯಾವನಿಂದ **ಸೂರ್ಯಃ**=ಸೂರ್ಯನು **ಉದೇತಿ**=ಉದಯಿಸುತ್ತಾನೆಯೊ, **ಯತ್ರ ಚ**=ಮತ್ತು ಯಾವನಲ್ಲಿ **ಅಸ್ತಂ ಗಚ್ಛತಿ**=ಅಸ್ತಮಿಸುತ್ತಾನೆಯೊ **ತಂ**=ಅವನನ್ನು **ಸರ್ವೇ**=ಎಲ್ಲ **ದೇವಾಃ**=ದೇವತೆಗಳು **ಅರ್ಪಿತಾಃ**=ಪ್ರವೇಶಿಸಿರುವರು; **ತತ್ ಉ**=ಅದನ್ನು **ಕಶ್ಚನ**=ಯಾವನೂ **ನ ಅತ್ಯೇತಿ**=ಮೀರಲಾರನು. **ಏತತ್ ವೈ ತತ್**=ಇದೇ ಅದು.

೯. ಯಾವನಿಂದ[1] ಸೂರ್ಯನು ಉದಯಿಸುತ್ತಾನೆಯೊ ಮತ್ತು ಯಾವನಲ್ಲಿ ಅಸ್ತಮಿಸುತ್ತಾನೆಯೊ ಅವನನ್ನು ಎಲ್ಲ ದೇವತೆಗಳು ಪ್ರವೇಶಿಸಿರುವರು; ಅವನನ್ನು ಯಾವನೂ ಮೀರಲಾರನು. ಇದೇ ಅದು.[2]

[[1] ಪ್ರಾಣಾತ್ಮಕನಾದ ಹಿರಣ್ಯಗರ್ಭನಿಂದ.
[2] ಆ ಹಿರಣ್ಯಗರ್ಭವು ಬ್ರಹ್ಮವೇ.]

**ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ ೧೦ ॥**

**ಯತ್ ಇಹ**=ಯಾವುದು ಇಲ್ಲಿರುವುದೊ **ತತ್ ಏವ**=ಅದೇ **ಅಮುತ್ರ**=ಅಲ್ಲಿರುವುದು; **ಯತ್ ಅಮುತ್ರ**=ಯಾವುದು ಅಲ್ಲಿರುವುದೊ **ತತ್ ಇಹ ಅನು**=ಅದೇ ಇಲ್ಲಿಯೂ ಇರುವುದು. **ಯಃ**=ಯಾವನು **ಇಹ**=ಇಲ್ಲಿ **ನಾನಾ ಇವ**=ಭಿನ್ನವಾಗಿರುವಂತೆ **ಪಶ್ಯತಿ**=ನೋಡುತ್ತಾನೆಯೊ **ಸಃ**=ಅವನು **ಮೃತ್ಯೋಃ**=ಮೃತ್ಯುವಿನಿಂದ **ಮೃತ್ಯುಂ**=ಮೃತ್ಯುವನ್ನು **ಆಪ್ನೋತಿ**=ಹೊಂದುತ್ತಾನೆ.

೧೦. ಯಾವುದು ಇಲ್ಲಿರುವುದೊ ಅದೇ ಅಲ್ಲಿರುವುದು;[1] ಯಾವುದು ಅಲ್ಲಿರುವುದೊ ಅದೇ ಇಲ್ಲಿಯೂ ಇರುವುದು.[2] ಯಾವನು ಇಲ್ಲಿ ಭಿನ್ನವಾಗಿರುವಂತೆ[3] ನೋಡುತ್ತಾನೆಯೊ ಅವನು ಮೃತ್ಯುವಿನಿಂದ ಮೃತ್ಯುವನ್ನು[4] ಹೊಂದುತ್ತಾನೆ.

[೧ ಯಾವುದು ಕಾರ್ಯಕರಣೋಪಾಧಿಗಳಿಂದ ಕೂಡಿ ಸಂಸಾರಧರ್ಮಗಳುಳ್ಳಂತೆ ಅವಿವೇಕಿಗಳಿಗೆ ಕಾಣುತ್ತಿರುವುದೊ ಅದೇ ಅಲ್ಲಿ ಸ್ವಾತ್ಮಸ್ಥವಾದ ನಿತ್ಯವಿಜ್ಞಾನಘನ ಸ್ವರೂಪವಾದ ಸಂಸಾರಧರ್ಮವರ್ಜಿತವಾದ ಬ್ರಹ್ಮ.

೨ ಯಾವುದು ಅಲ್ಲಿ ಎಂದರೆ ಆತ್ಮನಲ್ಲಿ ಇರುವುದೊ ಅದೇ ಇಲ್ಲಿ ಕಾರ್ಯಕರಣ ಗಳೆಂಬ ನಾಮರೂಪಗಳ ಉಪಾಧಿಯನ್ನು ಅನುಸರಿಸಿಕೊಂಡು ಕಾಣುತ್ತಿರುವುದು.

೩ 'ಪರಕ್ಕಿಂತ ನಾನು ಬೇರೆ; ನನಗಿಂತ ಪರಬ್ರಹ್ಮವು ಬೇರೆ.'

೪ ಪುನಃ ಪುನಃ ಹುಟ್ಟುವುದು, ಸಾಯುವುದು.]

**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ ೧೧ ॥**

ಇದಂ = ಇದು ಮನಸಾ ಏವ = ಮನಸ್ಸಿನಿಂದಲೇ ಆಪ್ತವ್ಯಂ = ಹೊಂದಲ್ಪಡ ತಕ್ಕದ್ದು; ಇಹ = ಇಲ್ಲಿ ಕಿಂಚನ ನಾನಾ ನ ಅಸ್ತಿ = ಏನೂ ಭಿನ್ನವಿಲ್ಲ. ಯಃ = ಯಾವನು ಇಹ = ಇಲ್ಲಿ ನಾನಾ ಇವ = ಭಿನ್ನವಾಗಿರುವಂತೆ ಪಶ್ಯತಿ = ನೋಡು ತ್ತಾನೆಯೊ ಸಃ = ಅವನು ಮೃತ್ಯೋಃ = ಮೃತ್ಯುವಿನಿಂದ ಮೃತ್ಯುಂ = ಮೃತ್ಯುವನ್ನು ಗಚ್ಛತಿ = ಹೊಂದುತ್ತಾನೆ.

೧೧. ಇದು ೧ ಮನಸ್ಸಿನಿಂದಲೇ ೨ ಹೊಂದಲ್ಪಡತಕ್ಕದ್ದು; ಇಲ್ಲಿ ಏನೂ ೩ ಭಿನ್ನವಿಲ್ಲ.೪ ಯಾವನು ಇಲ್ಲಿ ಭಿನ್ನವಾಗಿರುವಂತೆ ನೋಡು ತ್ತಾನೆಯೊ ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ.

[೧ ಬ್ರಹ್ಮವು.

೨ ಆಚಾರ್ಯಾಗಮಗಳಿಂದ ಸಂಸ್ಕೃತವಾದ.

೩ ಅಣುಮಾತ್ರವಾದರೂ.

೪ ಅವಿದ್ಯೆಯು ಹೋಗಿರುವುದರಿಂದ.]

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈ ತತ್ ॥ ೧೨ ॥**

ಅಂಗುಷ್ಠಮಾತ್ರಃ = ಅಂಗುಷ್ಠಪರಿಮಾಣವುಳ್ಳ ಪುರುಷಃ = ಪುರುಷನು ಮಧ್ಯೇ ಆತ್ಮನಿ = ಶರೀರದ ಮಧ್ಯದಲ್ಲಿ ತಿಷ್ಠತಿ = ಇರುತ್ತಾನೆ. ಭೂತಭವ್ಯಸ್ಯ = ಭೂತಭವಿಷ್ಯ ಗಳಿಗೆ ಈಶಾನಃ = ಒಡೆಯನು; ತತಃ = ಆ ಮೇಲೆ ನ ವಿಜುಗುಪ್ಸತೇ = ಕಾಪಾಡಿ ಕೊಳ್ಳಲು ಇಚ್ಛಿಸುವುದಿಲ್ಲ. ಏತತ್ ವೈ ತತ್ = ಇದೇ ಅದು.

೧೨. ಅಂಗುಷ್ಠಪರಿಮಾಣವುಳ್ಳ[೧] ಪುರುಷನು[೨] ಶರೀರಮಧ್ಯದಲ್ಲಿ ಇರುತ್ತಾನೆ. (ಅವನು) ಭೂತಭವಿಷ್ಯಗಳಿಗೆ ಒಡೆಯನು. ಆಮೇಲೆ (ತನ್ನನ್ನು) ಕಾಪಾಡಿಕೊಳ್ಳಲು ಇಚ್ಛಿಸುವುದಿಲ್ಲ. ಇದೇ ಅದು.

[೧ ಹೃದಯಪುಂಡರೀಕವು ಅಂಗುಷ್ಠಪರಿಮಾಣವುಳ್ಳದ್ದು. ಅದರಲ್ಲಿರುವ ಅಂತಃಕರಣೋಪಾಧಿಯಿಂದ ಆತ್ಮನು ಅಂಗುಷ್ಠಪರಿಮಾಣವುಳ್ಳವನಂತೆ ತೋರುತ್ತಿರುವನು. ಆದರೂ ಅವನು ಅನಂತನೇ.

೨ ಎಲ್ಲವನ್ನೂ ಪೂರ್ಣಮಾಡುವುದರಿಂದ ಪುರುಷನು.]

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥**
**ಏತದ್ವೈ ತತ್ ॥ ೧೩ ॥**

ಅಂಗುಷ್ಠಮಾತ್ರಃ=ಅಂಗುಷ್ಠಪರಿಮಾಣವುಳ್ಳ ಪುರುಷಃ=ಪುರುಷನು ಅಧೂಮಕಃ = ಹೊಗೆಯಿಲ್ಲದ ಜ್ಯೋತಿಃ ಇವ = ಜ್ಯೋತಿಯಂತೆ [ಇರುತ್ತಾನೆ]; ಭೂತಭವ್ಯಸ್ಯ ಈಶಾನಃ = ಭೂತಭವಿಷ್ಯಗಳಿಗೆ ಒಡೆಯನು; ಸಃ ಏವ = ಅವನೇ ಅದ್ಯ = ಇಂದು, ಸಃ ಉ = ಅವನೇ ಶ್ವಃ = ನಾಳೆ. ಏತತ್ ವೈ ತತ್ = ಇದೇ ಅದು.

೧೩. ಅಂಗುಷ್ಠಪರಿಮಾಣವುಳ್ಳ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ (ಇರುತ್ತಾನೆ); (ಅವನು) ಭೂತಭವಿಷ್ಯಗಳಿಗೆ ಒಡೆಯನು; ಇಂದೂ ಅವನೇ, ನಾಳೆಯೂ ಅವನೇ.[೧] ಇದೇ ಅದು.

[೧ ಈಗಲೂ ಪ್ರಾಣಿಗಳಲ್ಲಿ ಇರುವವನೂ ಮುಂದೆ ಹುಟ್ಟುವ ಪ್ರಾಣಿಗಳಲ್ಲಿ ಇರುವವನೂ ಇವನೇ. ಇವನಂಥ ಮತ್ತೊಬ್ಬನು ಹುಟ್ಟುವುದಿಲ್ಲ.]

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ ॥ ೧೪ ॥**

ದುರ್ಗೇ = ಎತ್ತರವಾದ ಸ್ಥಳದಲ್ಲಿ ವೃಷ್ಟಂ = ಸುರಿದ ಉದಕಂ = [ಮಳೆಯ] ನೀರು ಪರ್ವತೇಷು = ತಗ್ಗಾದ ಗುಡ್ಡಗಳಲ್ಲಿ ಯಥಾ = ಹೇಗೆ ವಿಧಾವತಿ = ಹರಿದು ಹೋಗುತ್ತದೆಯೊ, ಏವಂ = ಆ ರೀತಿಯಲ್ಲಿ ಧರ್ಮಾನ್ = ಆತ್ಮರನ್ನು ಪೃಥಕ್ ಪಶ್ಯನ್ = ಭಿನ್ನರೆಂದು ನೋಡುವವನು ತಾನ್ ಏವ = ಅವರನ್ನೇ ಅನುವಿಧಾವತಿ= ಅನುಸರಿಸುತ್ತಾನೆ.

೧೪. ಎತ್ತರವಾದ ಸ್ಥಳದಲ್ಲಿ ಸುರಿದ (ಮಳೆಯ) ನೀರು ತಗ್ಗಾದ ಗುಡ್ಡಗಳಲ್ಲಿ ಹೇಗೆ ಹರಿದುಹೋಗುತ್ತದೆಯೊ[೧] ಆ ರೀತಿಯಲ್ಲಿ ಆತ್ಮರನ್ನು ಭಿನ್ನರೆಂದು[೨] ನೋಡುವವನು ಅವರನ್ನೇ ಅನುಸರಿಸುತ್ತಾನೆ.[೩]

[ಬ್ರಹ್ಮದಲ್ಲಿ ಭೇದದರ್ಶನವನ್ನು ನಿಷೇಧಿಸಿ ಶ್ರುತಿಯು ಪುನಃ ಹೇಳುತ್ತದೆ.

[೧] ಚದರಿ ನಾಶವಾಗುತ್ತದೆಯೊ.

[೨] ಪ್ರತಿಶರೀರದಲ್ಲೂ ಭಿನ್ನನಾಗಿರುವನೆಂದು.

[೩] ಪುನಃ ಪುನಃ ಬೇರೆ ಬೇರೆ ಶರೀರವನ್ನು ಹೊಂದುತ್ತಾನೆ.]

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ ೧೫ ॥**

**ಯಥಾ** = ಹೇಗೆ **ಶುದ್ಧೇ** = ಶುದ್ಧವಾದ [ನೀರಿನಲ್ಲಿ] **ಆಸಿಕ್ತಂ** = ಹಾಕಿದ **ಶುದ್ಧಂ**=ಶುದ್ಧವಾದ **ಉದಕಂ** = ನೀರು **ತಾದೃಕ್ ಏವ** = ಅದರಂತೆಯೇ **ಭವತಿ**= ಆಗುತ್ತದೆಯೊ **ಗೌತಮ** = ಹೇ ಗೌತಮ, **ಏವಂ**=ಹಾಗೆಯೇ **ವಿಜಾನತಃ** = ಅರಿತುಕೊಂಡಿರುವ **ಮುನೇಃ** = ಮುನಿಯ **ಆತ್ಮಾ** = ಆತ್ಮನು **ಭವತಿ** = ಆಗುವನು.

೧೫. ಹೇಗೆ ಶುದ್ಧವಾದ (ನೀರಿನಲ್ಲಿ) ಹಾಕಿದ ಶುದ್ಧವಾದ ನೀರು ಅದರಂತೆಯೇ ಆಗುವುದೊ[೧] ಹಾಗೆಯೇ ಹೇ ಗೌತಮ, ಅರಿತುಕೊಂಡಿರುವ[೨] ಮುನಿಯ ಆತ್ಮನು ಆಗುವನು.

[[೧] ಏಕರಸವಾಗುವುದೊ.

[೨] ಏಕತ್ವವನ್ನು ಅರಿತುಕೊಂಡಿರುವ.]

## ಐದನೆಯ ವಲ್ಲೀ

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥**
**ಏತದ್ವೈ ತತ್ ॥ ೧ ॥**

**ಅಜಸ್ಯ**=ಅಜನಾದ **ಅವಕ್ರಚೇತಸಃ** = ಅವಕ್ರವಾದ ಚೇತಸ್ಸುಳ್ಳ [ಆತ್ಮನಿಗೆ] **ಏಕಾದಶದ್ವಾರಂ** = ಹನ್ನೊಂದು ದ್ವಾರಗಳಿರುವ **ಪುರಂ** = ಪುರವು [ಅಸ್ತಿ = ಇದೆ]; [**ಪುರಸ್ವಾಮಿನಂ ಪರಮೇಶ್ವರಂ** = ಪುರಸ್ವಾಮಿಯಾದ ಪರಮೇಶ್ವರನನ್ನು] **ಅನುಷ್ಠಾಯ** = ಧ್ಯಾನಮಾಡಿ **ನ ಶೋಚತಿ** = ಶೋಕಿಸುವುದಿಲ್ಲ. **ವಿಮುಕ್ತಃ ಚ** = ಎಲ್ಲ ಏಷಣಗಳಿಂದ ಬಿಡಲ್ಪಟ್ಟು **ವಿಮುಚ್ಯತೇ**=ಮುಕ್ತನಾಗುತ್ತಾನೆ. **ಏತತ್ ವೈ ತತ್**= ಇದೇ ಅದು.

೧. ಅಜನೂ[೧] ಅವಕ್ರವಾದ ಚೇತಸ್ಸುಳ್ಳವನೂ[೨] ಆದ (ಆತ್ಮನಿಗೆ) ಹನ್ನೊಂದು[೩] ದ್ವಾರಗಳಿರುವ ಪುರವು[೪] (ಇದೆ); (ಆ ಪುರಸ್ವಾಮಿಯಾದ ಪರಮೇಶ್ವರನನ್ನು) ಧ್ಯಾನಮಾಡಿ ಶೋಕಿಸುವುದಿಲ್ಲ, ಎಲ್ಲ ಏಷಣಗಳಿಂದ ಬಿಡಲ್ಪಟ್ಟು ಮುಕ್ತನಾಗುತ್ತಾನೆ.[೫] ಇದೇ ಅದು.

[[೧] ಜನ್ಮಾದಿವಿಕ್ರಿಯಾರಹಿತನೂ.
[೨] ಅಕುಟಿಲವೂ ಏಕರೂಪವೂ ಆದ ಚೇತಸ್ಸುಳ್ಳವನೂ.
[೩] ನೆತ್ತಿ ಬಾಯಿ ನಾಭಿ ಕಣ್ಣು ಕಿವಿ ಮೂಗು ಕೆಳಗೆ ಎರಡು ರಂಧ್ರಗಳು.
[೪] ಅನೇಕ ಉಪಕರಣಗಳಿಂದ ಕೂಡಿ ಶರೀರವು ಪುರದಂತೆ ಇರುವುದರಿಂದ ಪುರ.
[೫] ಇಲ್ಲಿಯೇ ಅವಿದ್ಯಾಕೃತವಾದ ಕಾಮುಕರ್ಮಬಂಧನಗಳಿಂದ ಮುಕ್ತನಾಗುತ್ತಾನೆ.]

**ಹಂಸಃ ಶುಚಿಷದ್ವಸುರಂತರಿಕ್ಷಸ-**
**ದ್ಧೋತಾ ವೇದಿಷದತಿಥಿರ್ದುರೋಣಸತ್ ।**
**ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ**
**ಋತಜಾ ಅದ್ರಿಜಾ ಋತಂ ಬೃಹತ್ ॥ ೨ ॥**

[**ಸಃ ಆತ್ಮಾ**=ಆ ಆತ್ಮನು] **ಹಂಸಃ**=[ಎಲ್ಲೆಲ್ಲಿಯೂ] ಹೋಗುವವನು, **ಶುಚಿಷತ್** = ಆಕಾಶದಲ್ಲಿ [ಆದಿತ್ಯರೂಪದಿಂದ] ಇರುವವನು, **ಅಂತರಿಕ್ಷಸತ್ ವಸುಃ**= ಅಂತರಿಕ್ಷದಲ್ಲಿರುವ ವಾಯುವು, **ಹೋತಾ ವೇದಿಷತ್** = ಹೋತೃರೂಪದಿಂದ ವೇದಿಯುಲ್ಲಿರುವವನು, **ಅತಿಥಿಃ ದುರೋಣಸತ್** = ಅತಿಥಿಯಾಗಿ ಕಲಶದಲ್ಲಿರುವವನು, **ನೃಷತ್**=ಮನುಷ್ಯರಲ್ಲಿರುವವನು, **ವರಸತ್**=ದೇವತೆಗಳಲ್ಲಿರುವವನು, **ಋತಸತ್**=

ಸತ್ಯದಲ್ಲಿರುವವನು, **ವ್ಯೋಮಸತ್** = ಆಕಾಶದಲ್ಲಿರುವವನು, **ಅಬ್ಜಾಃ** = ನೀರಿನಲ್ಲಿ ಹುಟ್ಟಿರುವವನು, **ಗೋಜಾಃ** = ಭೂಮಿಯಲ್ಲಿ ಹುಟ್ಟಿರುವವನು, **ಋತಜಾಃ** = ಯಜ್ಞಾಂಗಗಳ ರೂಪದಿಂದ ಹುಟ್ಟಿರುವವನು, **ಅದ್ರಿಜಾಃ**=ಪರ್ವತಗಳಿಂದ ಹುಟ್ಟಿರುವವನು; **ಋತಂ**=ಸತ್ಯಸ್ವರೂಪನು **ಬೃಹತ್**=ಬೃಹತ್ ಆದವನು.

೨. (ಆ ಆತ್ಮನು ಎಲ್ಲೆಲ್ಲಿಯೂ) ಹೋಗುವವನು, ಆಕಾಶದಲ್ಲಿ (ಆದಿತ್ಯರೂಪದಿಂದ) ಇರುವವನು, ಅಂತರಿಕ್ಷದಲ್ಲಿರುವ ವಾಯುವು, ಹೋತೃ ರೂಪದಿಂದ ವೇದಿಯಲ್ಲಿರುವವನು,[೧] ಅತಿಥಿಯಾಗಿ[೨] ಕಲಶದಲ್ಲಿರುವವನು, ಮನುಷ್ಯರಲ್ಲಿರುವವನು, ದೇವತೆಗಳಲ್ಲಿರುವವನು, ಸತ್ಯದಲ್ಲಿರುವವನು, ಆಕಾಶದಲ್ಲಿರುವವನು, ನೀರಿನಲ್ಲಿಯೂ[೩] ಭೂಮಿಯಲ್ಲಿಯೂ[೪] ಹುಟ್ಟಿರುವವನು, ಯಜ್ಞಾಂಗಗಳ ರೂಪದಿಂದ ಹುಟ್ಟಿರುವವನು, ಪರ್ವತಗಳಿಂದ[೫] ಹುಟ್ಟಿರುವವನು; (ಅವನು) ಸತ್ಯಸ್ವರೂಪನು, ಬೃಹತ್ತಾದವನು.

[ಆ ಆತ್ಮನು ಒಂದೇ ಪುರದಲ್ಲಿ ಇರುವವನಲ್ಲ. ಎಲ್ಲ ಪುರಗಳಲ್ಲಿ ಇರುವವನು.
[೧] ಅಗ್ನಿರೂಪದಿಂದ ಪೃಥ್ವಿಯಲ್ಲಿರುವವನು.
[೨] ಸೋಮನಾಗಿ; ಅಥವಾ ಅತಿಥಿಯ ರೂಪದಿಂದ ಮನೆಗಳಲ್ಲಿ ಇರುವವನು.
[೩] ಶಂಖ ಚಿಪ್ಪು ಮಕರ ಮೊದಲಾದ ರೂಪದಿಂದ.
[೪] ವ್ರೀಹಿಯವಾದಿರೂಪದಿಂದ.
[೫] ನದಿಯೇ ಮೊದಲಾದ ರೂಪದಿಂದ.]

**ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।**
**ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥ ೩ ॥**

[**ಸಃ ಆತ್ಮಾ**= ಆ ಆತ್ಮನು] **ಪ್ರಾಣಂ**= ಪ್ರಾಣವನ್ನು **ಊರ್ಧ್ವಂ**= ಮೇಲಕ್ಕೆ **ಉನ್ನಯತಿ** = ಎತ್ತುತ್ತಾನೆ, **ಅಪಾನಂ**= ಅಪಾನವಾಯುವನ್ನು **ಪ್ರತ್ಯಕ್ ಅಸ್ಯತಿ**= ಕೆಳಗೆ ಎಸೆಯುತ್ತಾನೆ. **ಮಧ್ಯೇ**=ಮಧ್ಯದಲ್ಲಿ **ಆಸೀನಂ**=ಕುಳಿತಿರುವ **ವಾಮನಂ**= ವಾಮನನನ್ನು **ವಿಶ್ವೇ**=ಎಲ್ಲ **ದೇವಾಃ**=ದೇವತೆಗಳೂ **ಉಪಾಸತೇ**=ಉಪಾಸಿಸುತ್ತಾರೆ.

೩. (ಆ ಆತ್ಮನು) ಪ್ರಾಣವನ್ನು[೧] ಮೇಲಕ್ಕೆ[೨] ಎತ್ತುತ್ತಾನೆ, ಅಪಾನವಾಯುವನ್ನು ಕೆಳಕ್ಕೆ ಎಸೆಯುತ್ತಾನೆ; ಮಧ್ಯದಲ್ಲಿ[೩] ಕುಳಿತಿರುವ ವಾಮನನನ್ನು[೪] ಎಲ್ಲ ದೇವತೆಗಳು[೫] ಉಪಾಸಿಸುತ್ತಾರೆ.[೬]

[[೧] ಪ್ರಾಣವೃತ್ತಿಯ ವಾಯುವನ್ನು.
[೨] ಹೃದಯದಿಂದ ಮೇಲಕ್ಕೆ.

೩ ಹೃದಯಕಮಲದ ಆಕಾಶದಲ್ಲಿ; ಎಂದರೆ ಬುದ್ಧಿಯಲ್ಲಿ ವ್ಯಕ್ತನಾಗುವ, ವಿಜ್ಞಾನ ಪ್ರಕಾಶನಾದ ವಾಮನನನ್ನು.
೪ ಭಜಿಸಲ್ಪಡಲು ಅರ್ಹನಾದ.
೫ ಚಕ್ಷುರಾದಿ ಪ್ರಾಣಗಳು.
೬ ರೂಪಾದಿಗಳ ಜ್ಞಾನವೆಂಬ ಕಾಣಿಕೆಯನ್ನು ಒಪ್ಪಿಸುತ್ತ ಸೇವಿಸುತ್ತಾರೆ.]

**ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।**
**ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥**
**ಏತದ್ವೈ ತತ್　　　　　　　　　　॥ ೪ ॥**

ಅಸ್ಯ=ಈ ಶರೀರಸ್ಥಸ್ಯ=ಶರೀರದಲ್ಲಿರುವ ದೇಹಿನಃ=ದೇಹಿಯು ವಿಸ್ರಂಸ-ಮಾನಸ್ಯ=ಸಡಿಲವಾಗುವಾಗ ದೇಹಾತ್ ವಿಮುಚ್ಯಮಾನಸ್ಯ=ದೇಹದಿಂದ ಮುಕ್ತನಾಗುವಾಗ ಅತ್ರ=ಇಲ್ಲಿ ಕಿಂ=ಏನು ಪರಿಶಿಷ್ಯತೇ=ಉಳಿಯುತ್ತದೆ? ಏತತ್ ವೈ ತತ್=ಇದೇ ಅದು.

೪. ಶರೀರದಲ್ಲಿರುವ ಈ ದೇಹಿಯು[೧] ಸಡಿಲವಾಗುವಾಗ ಅರ್ಥಾತ್ ದೇಹದಿಂದ ಮುಕ್ತನಾಗುವಾಗ ಇಲ್ಲಿ ಏನು ಉಳಿಯುತ್ತದೆ?[೨] ಇದೇ ಅದು.

[೧ ದೇಹದಲ್ಲಿರುವ ಆತ್ಮನು.
೨ ಏನೂ ಉಳಿಯುವುದಿಲ್ಲ.]

**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।**
**ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ　　　　॥ ೫ ॥**

ಕಶ್ಚನ ಮರ್ತ್ಯಃ=ಯಾವ ಮರ್ತ್ಯನೂ ಪ್ರಾಣೇನ=ಪ್ರಾಣದಿಂದ ನ ಜೀವತಿ=ಜೀವಿಸುವುದಿಲ್ಲ, ಅಪಾನೇನ=ಅಪಾನದಿಂದ ನ=ಜೀವಿಸುವುದಿಲ್ಲ; ತು=ಆದರೆ ಯಸ್ಮಿನ್=ಯಾವನಲ್ಲಿ ಏತೌ=ಇವೆರಡೂ ಉಪಾಶ್ರಿತೌ=ಆಶ್ರಯಿಸಿಕೊಂಡಿರುವುವೊ [ಅಂಥ] ಇತರೇಣ=ಇನ್ನೊಬ್ಬನಿಂದ ಜೀವಂತಿ=ಜೀವಿಸುತ್ತಾರೆ.

೫. ಯಾವ ಮರ್ತ್ಯನೂ ಪ್ರಾಣದಿಂದಾಗಲಿ ಅಪಾನದಿಂದಾಗಲಿ ಜೀವಿಸುವುದಿಲ್ಲ. ಯಾವನಲ್ಲಿ ಇವೆರಡೂ ಆಶ್ರಯಿಸಿಕೊಂಡಿರುವುವೊ ಅಂಥ ಇನ್ನೊಬ್ಬನಿಂದ ಜೀವಿಸುತ್ತಾರೆ.

[ಪ್ರಾಣಾಪಾನಗಳು ಪರಾರ್ಥವಾಗಿರುವುದರಿಂದ ಇವು ಮನುಷ್ಯನು ಜೀವಿಸಿರುವುದಕ್ಕೆ ಕಾರಣವಲ್ಲ. ಇವುಗಳಿಗಿಂತ ಭಿನ್ನನಾದ ಆತ್ಮನಿಂದ ಎಲ್ಲರೂ ಜೀವಿಸಿರುತ್ತಾರೆ.]

**ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।**
**ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥ ೬ ॥**

**ಗೌತಮ** = ಹೇ ಗೌತಮ, **ಹಂತ**=ಈಗ **ತೇ**=ನಿನಗೆ **ಇದಂ**=ಈ **ಗುಹ್ಯಂ**= ರಹಸ್ಯವಾದ **ಸನಾತನಂ** = ಸನಾತನವಾದ **ಬ್ರಹ್ಮ** = ಬ್ರಹ್ಮವನ್ನು **ಪ್ರವಕ್ಷ್ಯಾಮಿ** = ಹೇಳುತ್ತೇನೆ. **ಚ** = ಮತ್ತು **ಮರಣಂ** = ಮೃತ್ಯುವನ್ನು **ಪ್ರಾಪ್ಯ**=ಹೊಂದಿ **ಆತ್ಮಾ**= ಆತ್ಮನು **ಯಥಾ ಭವತಿ** = ಹೇಗೆ ಆಗುವನೊ [ಅದನ್ನೂ ಹೇಳುತ್ತೇನೆ].

೬. ಹೇ ಗೌತಮ, ಈಗ ಈ ರಹಸ್ಯವಾದ ಸನಾತನವಾದ ಬ್ರಹ್ಮವನ್ನು ಹೇಳುತ್ತೇನೆ. ಮೃತ್ಯುವನ್ನು ಹೊಂದಿ ಆತ್ಮನು ಹೇಗೆ ಆಗುವನೊ (ಅದನ್ನೂ ಹೇಳುತ್ತೇನೆ).

**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।**
**ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥ ೭ ॥**

**ಯಥಾಕರ್ಮ** = ಕರ್ಮಕ್ಕೆ ಅನುಸಾರವಾಗಿಯೂ **ಯಥಾಶ್ರುತಂ** = ಜ್ಞಾನಕ್ಕನುಸಾರವಾಗಿಯೂ **ಅನ್ಯೇ ದೇಹಿನಃ** = ಕೆಲವರು ದೇಹಿಗಳು **ಶರೀರತ್ವಾಯ** = ಶರೀರಗ್ರಹಣಕ್ಕಾಗಿ **ಯೋನಿಂ** = ಯೋನಿಯನ್ನು **ಪ್ರಪದ್ಯಂತೇ** = ಹೊಂದುತ್ತಾರೆ, **ಅನ್ಯೇ** = ಇನ್ನು ಕೆಲವರು **ಸ್ಥಾಣುಂ** = ಸ್ಥಾವರಜನ್ಮವನ್ನು **ಅನುಸಂಯಂತಿ** = ಹೊಂದುತ್ತಾರೆ.

೭. ಕರ್ಮಕ್ಕೆ ಅನುಸಾರವಾಗಿಯೂ[೧] ಜ್ಞಾನಕ್ಕೆ ಅನುಸಾರವಾಗಿಯೂ[೨] ಕೆಲವರು ದೇಹಿಗಳು ಶರೀರಗ್ರಹಣಕ್ಕಾಗಿ ಯೋನಿಯನ್ನೂ ಇನ್ನು ಕೆಲವರು ಸ್ಥಾವರಜನ್ಮವನ್ನೂ ಹೊಂದುತ್ತಾರೆ.

[[೧] ಈ ಜನ್ಮದಲ್ಲಿ ಮಾಡಿದ ಕರ್ಮಕ್ಕೆ ಅನುಸಾರವಾಗಿ.
[೨] ಇಲ್ಲಿ ಆರ್ಜಿತವಾದ ಜ್ಞಾನಕ್ಕೆ ಅನುಸಾರವಾಗಿ.]

**ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥ ೮ ॥**

**ಸುಪ್ತೇಷು** = [ಪ್ರಾಣಾದಿಗಳು] ನಿದ್ರಿಸುತ್ತಿರುವಾಗ **ಕಾಮಂ ಕಾಮಂ** = ಬೇರೆ ಬೇರೆ ಕಾಮುಗಳನ್ನು **ನಿರ್ಮಿಮಾಣಃ** = ನಿರ್ಮಿಸುತ್ತ **ಯಃ** = ಯಾವ **ಏಷಃ** = ಈ

ಪುರುಷಃ=ಪುರುಷನು ಜಾಗರ್ತಿ=ಎಚ್ಚತ್ತಿರುವನೊ ತತ್ ಏವ=ಅದೇ ಶುಕ್ರಂ=ಶುದ್ಧವಾದುದು, ತತ್ ಬ್ರಹ್ಮ=ಅದು ಬ್ರಹ್ಮ ತತ್ ಏವ ಅಮೃತಂ=ಅದೇ ಅಮೃತವು ಉಚ್ಯತೇ=ಎಂದು ಹೇಳಲ್ಪಡುತ್ತದೆ; ಸರ್ವೇ ಲೋಕಾಃ=ಎಲ್ಲ ಲೋಕಗಳು ತಸ್ಮಿನ್=ಅದರಲ್ಲಿ ಶ್ರಿತಾಃ=ಆಶ್ರಯವನ್ನು ಹೊಂದಿವೆ; ತತ್ ಉ=ಅದನ್ನು ಕಶ್ಚನ=ಯಾವನೂ ನ ಅತ್ಯೇತಿ=ಮೀರಲಾರನು; ಏತತ್ ವೈ ತತ್=ಇದೇ ಅದು.

೮. (ಪ್ರಾಣಾದಿಗಳು) ನಿದ್ರಿಸುತ್ತಿರುವಾಗ ಬೇರೆ ಬೇರೆ ಕಾಮುಗಳನ್ನು ನಿರ್ಮಿಸುತ್ತ ಯಾವ ಈ ಪುರುಷನು ಎಚ್ಚತ್ತಿರುವನೊ ಅವನೇ ಶುದ್ಧನು, ಅವನೇ ಬ್ರಹ್ಮ, ಅವನೇ ಅಮೃತ ಎಂದು ಹೇಳಲ್ಪಡುತ್ತಾನೆ; ಎಲ್ಲ ಲೋಕಗಳೂ ಅವನಲ್ಲಿ ಆಶ್ರಯವನ್ನು ಹೊಂದಿವೆ. ಅವನನ್ನು ಯಾವನೂ ಮೀರಲಾರನು. ಇದೇ ಅದು.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ ೯ ॥**

ಯಥಾ=ಹೇಗೆ ಏಕಃ=ಒಂದೇ ಅಗ್ನಿಃ=ಅಗ್ನಿಯು ಭುವನಂ=ಈ ಲೋಕವನ್ನು ಪ್ರವಿಷ್ಟಃ=ಪ್ರವೇಶಿಸಿ ರೂಪಂ ರೂಪಂ=ಎಲ್ಲ ರೂಪಗಳಿಗೂ ಪ್ರತಿರೂಪಃ ಬಭೂವ=ಪ್ರತಿರೂಪವಾಗಿರುವುದೊ ತಥಾ=ಹಾಗೆಯೇ ಏಕಃ=ಒಬ್ಬನೇ ಸರ್ವ-ಭೂತಾಂತರಾತ್ಮಾ=ಸರ್ವಭೂತಾಂತರಾತ್ಮನು ರೂಪಂ ರೂಪಂ=ಎಲ್ಲ ರೂಪಗಳಿಗೂ ಪ್ರತಿರೂಪಃ [ಬಭೂವ]=ಪ್ರತಿರೂಪನಾಗಿರುವನು, ಬಹಿಃ ಚ=ಹೊರಗೂ ಇರುವನು.

೯. ಹೇಗೆ ಒಂದೇ ಅಗ್ನಿಯು ಈ ಲೋಕವನ್ನು ಪ್ರವೇಶಿಸಿ ಎಲ್ಲ ರೂಪಗಳಿಗೂ ಪ್ರತಿರೂಪವಾಗಿರುವುದೊ[೧] ಹಾಗೆಯೇ ಒಬ್ಬನೇ ಸರ್ವ ಭೂತಾಂತರಾತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು[೨] ಮತ್ತು ಹೊರಗೂ ಇರುವನು.[೩]

[[೧] ಅಗ್ನಿಯು ಒಂದೇ ಆಗಿದ್ದರೂ ತಾನು ಸುಡತಕ್ಕ ವಸ್ತುಗಳ ಭೇದವನ್ನನುಸರಿಸಿ ಬಹುವಿಧವಾಗಿರುತ್ತದೆ.

[೨] ಶರೀರಭೇದವನ್ನನುಸರಿಸಿ ಪ್ರತಿರೂಪನಾಗಿರುವನು.

[೩] ಆಕಾಶದಂತೆ ತನ್ನ ಅವಿಕಾರವಾದ ರೂಪದಿಂದ.]

**ವಾಯುರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪೋ ಬಭೂವ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ ೧೦ ॥**

**ಯಥಾ ಏಕಃ ವಾಯುಃ**=ವಾಯುವು **ಭುವನಂ ಪ್ರವಿಷ್ಟಃ ರೂಪಂ ರೂಪಂ ಪ್ರತಿರೂಪಃ ಬಭೂವ, ತಥಾ ಏಕಃ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪಃ, ಬಹಿಃ ಚ.**

೧೦. ಹೇಗೆ ಒಂದೇ ವಾಯುವು ಈ ಲೋಕವನ್ನು ಪ್ರವೇಶಿಸಿ ಎಲ್ಲ ರೂಪಗಳಿಗೂ ಪ್ರತಿರೂಪವಾಗಿರುವುದೊ ಹಾಗೆಯೇ ಒಬ್ಬನೇ ಸರ್ವ ಭೂತಾಂತರಾತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು ಮತ್ತು ಹೊರಗೂ ಇರುವನು.

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷು-**
**ರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ ೧೧ ॥**

**ಸರ್ವಲೋಕಸ್ಯ**=ಸರ್ವಲೋಕದ **ಚಕ್ಷುಃ**=ಕಣ್ಣಾದ **ಸೂರ್ಯಃ**=ಸೂರ್ಯನು **ಯಥಾ**=ಹೇಗೆ **ಚಾಕ್ಷುಷೈಃ**=ಕಣ್ಣಿಗೆ ಸಂಬಂಧಪಟ್ಟ [ಮತ್ತು] **ಬಾಹ್ಯದೋಷೈಃ**=ಬಾಹ್ಯದೋಷಗಳಿಂದ **ನ ಲಿಪ್ಯತೇ** = ಲಿಪ್ತನಾಗುವುದಿಲ್ಲವೊ **ತಥಾ** = ಹಾಗೆಯೇ **ಏಕಃ** = ಅದ್ವಿತೀಯನಾದ **ಸರ್ವಭೂತಾಂತರಾತ್ಮಾ** = ಸರ್ವಪ್ರಾಣಿಗಳ ಅಂತರಾತ್ಮನು **ಲೋಕದುಃಖೇನ**=ಲೋಕದುಃಖದಿಂದ **ನ ಲಿಪ್ಯತೇ**=ಲಿಪ್ತನಾಗುವುದಿಲ್ಲ; **ಬಾಹ್ಯಃ**=ಹೊರಗೂ ಇರುತ್ತಾನೆ.

೧೧. ಸರ್ವಲೋಕದ ಕಣ್ಣಾದ ಸೂರ್ಯನು ಹೇಗೆ ಕಣ್ಣಿಗೆ ಸಂಬಂಧಪಟ್ಟ ಮತ್ತು ಬಾಹ್ಯವಾದ ದೋಷಗಳಿಂದ ಲಿಪ್ತನಾಗುವುದಿಲ್ಲವೊ ಹಾಗೆಯೇ ಅದ್ವಿತೀಯನಾದ ಸರ್ವಪ್ರಾಣಿಗಳ ಅಂತರಾತ್ಮನು ಲೋಕದ ದುಃಖದಿಂದ ಲಿಪ್ತನಾಗುವುದಿಲ್ಲ; (ಏಕೆಂದರೆ ಅವನು) ಹೊರಗೆ ಇರುತ್ತಾನೆ.

[ಸೂರ್ಯನು ಬಾಹ್ಯವಸ್ತುಗಳನ್ನು ಬೆಳಗಿಸಿದರೂ ಅವುಗಳ ದೋಷದಿಂದ ಲಿಪ್ತನಾಗುವುದಿಲ್ಲ. ಅದೇ ಪ್ರಕಾರ ಒಬ್ಬನೇ ಆದ ಆತ್ಮನು ಸರ್ವಪ್ರಾಣಿಗಳ ಆತ್ಮನಾಗಿದ್ದರೂ ಅವುಗಳ ಕರ್ಮಾದಿದೋಷಗಳಿಂದ ಲಿಪ್ತನಾಗುವುದಿಲ್ಲ. • ಕತ್ತಲಿನಲ್ಲಿ ಕಾಣುವ ಹಗ್ಗವನ್ನು ಸರ್ಪವೆಂದು ಭಾವಿಸಿದಂತೆ ಅವಿದ್ಯೆಯ ಮೂಲಕ ಜಗತ್ತೆಲ್ಲವೂ

ಆತ್ಮವಸ್ತುವಿನಲ್ಲಿ ಆರೋಪಿಸಲ್ಪಟ್ಟಿದೆ. ಹಗ್ಗವನ್ನು ಹಾವೆಂದು ಭ್ರಮಿಸಿದರೂ ಹಗ್ಗದಲ್ಲಿ ಯಾವ ಬದಲಾವಣೆಯೂ ಉಂಟಾಗದ ಹಾಗೆ ಅಧ್ಯಾಸದಿಂದ ಆತ್ಮದ ಸ್ವರೂಪದಲ್ಲಿ ಯಾವ ವಿಧವಾದ ವಿಕಾರವೂ ಆಗುವುದಿಲ್ಲ.]

**ಏಕೋ ವಶೀ ಸರ್ವಭೂತಾಂತರಾತ್ಮಾ**
**ಏಕಂ ರೂಪಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-**
**ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ ೧೨ ॥**

ಏಕಃ = ಅದ್ವಿತೀಯನೂ ವಶೀ = ವಶಿಯೂ ಸರ್ವಭೂತಾಂತರಾತ್ಮಾ=ಸರ್ವಭೂತಾಂತರಾತ್ಮನೂ [ಆದ] ಯಃ=ಯಾವನು ಏಕಂ ರೂಪಂ=ಒಂದು ರೂಪವನ್ನು ಬಹುಧಾ ಕರೋತಿ = ಬಹುವಿಧವಾಗಿ ಮಾಡಿಕೊಂಡಿರುವನೊ ತಂ = ಅವನನ್ನು ಯೇ ಧೀರಾಃ = ಯಾವ ವಿವೇಕಿಗಳು ಆತ್ಮಸ್ಥಂ = ಆತ್ಮದಲ್ಲಿ ಇರುವನನ್ನಾಗಿ ಅನುಪಶ್ಯಂತಿ=ನೋಡುತ್ತಾರೆಯೊ ತೇಷಾಂ=ಅವರಿಗೆ ಶಾಶ್ವತಂ=ಶಾಶ್ವತವಾದ ಸುಖಂ=ಸುಖವು; ನ ಇತರೇಷಾಂ = ಇತರರಿಗಲ್ಲ.

೧೨. (ಆತ್ಮನು) ಅದ್ವಿತೀಯನು,[೧] ವಶಿ,[೨] ಸರ್ವಪ್ರಾಣಿಗಳ ಅಂತರಾತ್ಮ, ಒಂದು ರೂಪವನ್ನು ಬಹುವಿಧವಾಗಿ ಮಾಡಿಕೊಂಡಿರುತ್ತಾನೆ;[೩] ಆತ್ಮದಲ್ಲಿ[೪] ಇರುವ ಅವನನ್ನು ಯಾವ ವಿವೇಕಿಗಳು ನೋಡುತ್ತಾರೆಯೊ[೫] ಅವರಿಗೇ ಶಾಶ್ವತವಾದ ಸುಖವು;[೬] ಇತರರಿಗಲ್ಲ.[೭]

[[೧] ಅವನಿಗೆ ಸಮನಾದ ಅಥವಾ ಅಧಿಕನಾದ ಮತ್ತೊಬ್ಬನು ಇಲ್ಲ.
[೨] ಜಗತ್ತೆಲ್ಲವೂ ಅವನ ವಶದಲ್ಲಿರುವುದರಿಂದ.
[೩] ಆತ್ಮನು ಏಕವಾದ ವಿಜ್ಞಾನಘನರೂಪನಾದರೂ ನಾಮರೂಪಗಳೆಂಬ ಉಪಾಧಿಗಳ ಕಾರಣದಿಂದ ಬಹುವಿಧವಾಗಿ ಮಾಡಿಕೊಂಡಿರುತ್ತಾನೆ.
[೪] ಹೃದಯಾಕಾಶದಲ್ಲಿರುವ ಬುದ್ಧಿಯಲ್ಲಿ ಚೈತನ್ಯರೂಪದಿಂದ.
[೫] ಆಚಾರ್ಯಾಗಮೋಪದೇಶವನ್ನು ಅನುಸರಿಸಿ ಸಾಕ್ಷಾತ್ಕರಿಸುತ್ತಾರೆಯೊ.
[೬] ಆತ್ಮಾನಂದಲಕ್ಷಣವಾದ.
[೭] ಬಾಹ್ಯಾಸಕ್ತಿಯುಳ್ಳ ಅವಿವೇಕಿಗಳಿಗೆ.]

**ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾ-**
**ಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-**
**ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥ ೧೩ ॥**

**ಅನಿತ್ಯಾನಾಂ**=ಅನಿತ್ಯವಸ್ತುಗಳಲ್ಲಿ **ನಿತ್ಯಃ**=ನಿತ್ಯನೂ **ಚೇತನಾನಾಂ**=ಚೇತನರಿಗೆ **ಚೇತನಃ** = ಚೈತನ್ಯನೂ [ಆದ] **ಯಃ** = ಯಾವನು **ಏಕಃ** = ಒಬ್ಬನೇ [ಆಗಿದ್ದರೂ] **ಬಹೂನಾಂ** = ಬಹುಜೀವರಿಗೆ **ಕಾಮಾನ್** = ಕರ್ಮಫಲವನ್ನು **ವಿದಧಾತಿ** = ಕೊಡುತ್ತಾನೆಯೊ, **ತಂ** = ಅವನನ್ನು **ಯೇ ಧೀರಾಃ** = ಯಾವ ವಿವೇಕಿಗಳು **ಆತ್ಮಸ್ಥಂ** = ಆತ್ಮದಲ್ಲಿರುವವನನ್ನಾಗಿ **ಅನುಪಶ್ಯಂತಿ** = ನೋಡುತ್ತಾರೆಯೊ **ತೇಷಾಂ** = ಅವರಿಗೆ **ಶಾಶ್ವತೀ** = ಶಾಶ್ವತವಾದ **ಶಾಂತಿಃ** = ಶಾಂತಿಯು; **ನ ಇತರೇಷಾಂ** = ಇತರರಿಗಲ್ಲ.

೧೩. (ಆತ್ಮನು) ಅನಿತ್ಯವಸ್ತುಗಳಲ್ಲಿ ನಿತ್ಯನು,[೧] ಚೇತನರಿಗೆ ಚೈತನ್ಯನು,[೨] ಒಬ್ಬನೇ ಆಗಿದ್ದರೂ ಬಹುಜೀವರಿಗೆ[೩] ಕರ್ಮಫಲಗಳನ್ನು ಕೊಡುತ್ತಾನೆ;[೪] ಆತ್ಮದಲ್ಲಿರುವ ಅವನನ್ನು ಯಾವ ವಿವೇಕಿಗಳು ನೋಡುತ್ತಾರೆಯೊ ಅವರಿಗೇ ಶಾಶ್ವತವಾದ ಶಾಂತಿ; ಇತರರಿಗಲ್ಲ.

[[೧] ವಿನಾಶವಾಗುತ್ತಿರುವ ವಸ್ತುಗಳಲ್ಲಿ ನಾಶವಾಗದವನು.

[೨] ಆತ್ಮಚೈತನ್ಯದಿಂದಲೇ ಎಲ್ಲರಿಗೂ ಚೈತನ್ಯವು ಉಂಟಾಗುವುದು.

[೩] ಸಂಸಾರಿಗಳಿಗೆ ಅವರ ಕರ್ಮಗಳಿಗನುಗುಣವಾಗಿ.

[೪] ಆಯಾಸವಿಲ್ಲದೆ.]

**ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।**
**ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ ॥ ೧೪ ॥**

**ಅನಿರ್ದೇಶ್ಯಂ** = ನಿರ್ದೇಶಿಸಲು ಅಶಕ್ಯವಾದ **ಪರಮಂ ಸುಖಂ** = ಪರಮಸುಖವನ್ನು **ಏತತ್ ತತ್ ಇತಿ** = ಇದೇ ಅದು ಎಂದು **ಮನ್ಯಂತೇ** = ತಿಳಿಯುತ್ತಾರೆ. **ತತ್** = ಅದನ್ನು **ಕಥಂ ನು** = ಹೇಗೆ **ವಿಜಾನೀಯಾಂ** = ತಿಳಿದುಕೊಳ್ಳಲಿ? **ಕಿಂ ಉ ಭಾತಿ** = [ಅದು] ಪ್ರಕಾಶಿಸುವುದೊ, **ವಿಭಾತಿ** = ಸ್ಪಷ್ಟವಾಗಿ ಪ್ರಕಾಶಿಸುವುದೊ **ವಾ** [**ನ ಇತಿ**] = ಅಥವಾ ಇಲ್ಲವೊ?

೧೪. ನಿರ್ದೇಶಿಸಲು ಅಶಕ್ಯವಾದ ಪರಮಸುಖವನ್ನು ಇದೇ ಅದು ಎಂದು ತಿಳಿಯುತ್ತಾರೆ.[೧] ಅದನ್ನು[೨] ಹೇಗೆ ತಿಳಿದುಕೊಳ್ಳಲಿ? ಅದು ಪ್ರಕಾಶಿಸುವುದೊ, ಸ್ಪಷ್ಟವಾಗಿ ಪ್ರಕಾಶಿಸುವುದೊ[೩] ಅಥವಾ ಇಲ್ಲವೊ?

[[೧] ಏಷಣಗಳನ್ನು ತೊರೆದವರು.

[೨] ಆ ಸುಖವನ್ನು.

[೩] ಅದು ಪ್ರಕಾಶಾತ್ಮಕವಾಗಿದ್ದರೆ ನಮ್ಮಂಥವರ ಬುದ್ಧಿಗೆ ಸ್ಪಷ್ಟವಾಗಿ ಕಾಣಿಸುವುದೊ ಇಲ್ಲವೊ?]

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ　　　　॥ ೧೫ ॥

ತತ್ರ = ಅಲ್ಲಿ ಸೂರ್ಯಃ = ಸೂರ್ಯನು ನ ಭಾತಿ = ಪ್ರಕಾಶಿಸುವುದಿಲ್ಲ, ಚಂದ್ರತಾರಕಂ = ಚಂದ್ರನಕ್ಷತ್ರಗಳು ನ=ಪ್ರಕಾಶಿಸುವುದಿಲ್ಲ, ಇಮಾಃ ವಿದ್ಯುತಃ= ಈ ಮಿಂಚುಗಳು ನ ಭಾಂತಿ = ಪ್ರಕಾಶಿಸುವುದಿಲ್ಲ; ಅಯಂ ಅಗ್ನಿಃ ಕುತಃ = ಈ ಅಗ್ನಿಯು ಪ್ರಕಾಶಿಸುವುದೆಲ್ಲಿ? ತಂ ಏವ ಭಾಂತಂ = ಪ್ರಕಾಶಿಸುತ್ತಿರುವ ಅವನನ್ನೇ ಸರ್ವಂ=ಎಲ್ಲವೂ ಅನುಭಾತಿ = ಅನುಸರಿಸಿ ಪ್ರಕಾಶಿಸುತ್ತಿರುವುದು; ತಸ್ಯ ಭಾಸಾ= ಅವನ ಪ್ರಕಾಶದಿಂದಲೇ ಇದಂ ಸರ್ವಂ=ಇದೆಲ್ಲವೂ ವಿಭಾತಿ=ಪ್ರಕಾಶಿಸುತ್ತಿರುವುದು.

**೧೫.** ಅಲ್ಲಿ[೧] ಸೂರ್ಯನಾಗಲಿ ಚಂದ್ರನಾಗಲಿ ನಕ್ಷತ್ರಗಳಾಗಲಿ ಪ್ರಕಾಶಿಸುವುದಿಲ್ಲ, ಈ ಮಿಂಚುಗಳೂ ಪ್ರಕಾಶಿಸುವುದಿಲ್ಲ; ಈ[೨] ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುದು. ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು.

[೧ ತನ್ನ ಆತ್ಮವಾದ ಬ್ರಹ್ಮದಲ್ಲಿ.
೨ ನಮ್ಮ ಕಣ್ಣಿಗೆ ಕಾಣುವ.]

# ಆರನೆಯ ವಲ್ಲೀ

**ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ।**
**ಏತದ್ವೈ ತತ್ ॥ ೧ ॥**

**ಊರ್ಧ್ವಮೂಲಃ**=ಮೇಲೆ ಬುಡವಿರುವ **ಅವಾಕ್ಶಾಖಃ**=ಕೆಳಗೆ ಶಾಖೆಗಳಿರುವ **ಏಷಃ ಅಶ್ವತ್ಥಃ** = ಈ ಅಶ್ವತ್ಥವು **ಸನಾತನಃ** = ಸನಾತನವಾದುದು **ತತ್ ಏವ** = ಅದೇ **ಶುಕ್ರಂ** = ಶುದ್ಧವಾದುದು, **ತತ್ ಬ್ರಹ್ಮ** = ಅದು ಬ್ರಹ್ಮ, **ತತ್ ಏವ ಅಮೃತಂ** = ಅದೇ ಅಮೃತವು [ಎಂದು] **ಉಚ್ಯತೇ** = ಹೇಳಲ್ಪಡುತ್ತದೆ. **ಸರ್ವೇ ಲೋಕಾಃ** = ಎಲ್ಲ ಲೋಕಗಳೂ **ತಸ್ಮಿನ್** = ಅದರಲ್ಲಿ **ಶ್ರಿತಾಃ** = ಆಶ್ರಯವನ್ನು ಹೊಂದಿವೆ; **ತತ್ ಉ** = ಅದನ್ನು **ಕಶ್ಚನ** = ಯಾವನೂ **ನ ಅತ್ಯೇತಿ** = ಮೀರ ಲಾರನು. **ಏತತ್ ವೈ ತತ್** = ಇದೇ ಅದು.

**೧.** ಮೇಲೆ[೧] ಬುಡವಿರುವ ಕೆಳಗೆ ಶಾಖೆಗಳಿರುವ ಈ ಅಶ್ವತ್ಥವು ಸನಾತನವಾದುದು. ಅದೇ[೨] ಶುದ್ಧವಾದುದು, ಅದೇ ಬ್ರಹ್ಮ. ಅದೇ ಅಮೃತ ಎಂದು ಹೇಳಲ್ಪಡುತ್ತದೆ; ಎಲ್ಲ ಲೋಕಗಳು ಅದರಲ್ಲಿ ಆಶ್ರಯ ವನ್ನು ಹೊಂದಿವೆ. ಅದನ್ನು ಯಾವನೂ ಮೀರಲಾರನು. ಇದೇ ಅದು.

[ಸಂಸಾರವೆಂಬ ವೃಕ್ಷದ ಸ್ವರೂಪವನ್ನು ನಿರ್ಧರಿಸುವುದರ ಮೂಲಕ ಅದರ ಮೂಲ ವಾದ ಬ್ರಹ್ಮದ ಸ್ವರೂಪವನ್ನು ನಿರ್ಧರಿಸಲು ಈ ಆರನೆಯ ವಲ್ಲಿಯು ಆರಂಭವಾಗಿದೆ. ಭಗವದ್ಗೀತೆಯಲ್ಲೂ (೧೫, ೧-೩) ಸಂಸಾರವನ್ನು ಅಶ್ವತ್ಥವೃಕ್ಷಕ್ಕೆ ಹೋಲಿಸಿದೆ.

[೧] ವಿಷ್ಣುವಿನ ಪರಮಪದ.

[೨] ಸಂಸಾರವೃಕ್ಷದ ಬುಡ.]

**ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ ೨ ॥**

**ಇದಂ ಯತ್ ಕಿಂಚ ಜಗತ್ ಸರ್ವಂ** = ಈ ಜಗತ್ತೆಲ್ಲವೂ **ಪ್ರಾಣೇ [ಸತಿ]** = ಪ್ರಾಣವಿರುವಾಗ **ನಿಃಸೃತಂ** = ಹೊರಕ್ಕೆ ಬಂದು **ಏಜತಿ** = ಕಂಪಿಸುತ್ತದೆ. **ಉದ್ಯತಂ ವಜ್ರಂ [ಇವ]** = ಎತ್ತಿದ ವಜ್ರದಂತಿರುವ [ಇದು] **ಮಹದ್ಭಯಂ**=ಮಹಾಭಯವು.

ಯೇ = ಯಾರು ಏತತ್ = ಇದನ್ನು ವಿದುಃ = ತಿಳಿಯುವರೊ ತೇ = ಅವರು ಅಮೃತಾಃ ಭವಂತಿ = ಅಮೃತರಾಗುವರು.

೨. ಪ್ರಾಣವಿರುವಾಗ[೧] ಈ ಜಗತ್ತೆಲ್ಲವೂ ಹೊರಗೆ ಬಂದು ಕಂಪಿಸುತ್ತದೆ.[೨] ಎತ್ತಿದ ವಜ್ರಾಯುಧದಂತಿರುವ ಇದು ದೊಡ್ಡ ಭಯವು. ಯಾರು ಇದನ್ನು ತಿಳಿದುಕೊಳ್ಳುವರೊ ಅವರು ಅಮೃತರಾಗುವರು.

[೧ ಪರಬ್ರಹ್ಮವಿದ್ದರೆ.
೨ ನಿಯಮದಿಂದ ಕೆಲಸಮಾಡುತ್ತದೆ.]

**ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥ ೩ ॥**

ಅಸ್ಯ = ಇದರ ಭಯಾತ್ = ಭಯದಿಂದ ಅಗ್ನಿಃ = ಅಗ್ನಿಯು ತಪತಿ = ಸುಡುತ್ತಾನೆ; ಭಯಾತ್ ಸೂರ್ಯಃ ತಪತಿ = ಭಯದಿಂದ ಸೂರ್ಯನು ಪ್ರಕಾಶಿಸುತ್ತಾನೆ; ಭಯಾತ್ ಇಂದ್ರಃ ಚ ವಾಯುಃ ಚ = ಭಯದಿಂದ ಇಂದ್ರನು ಮತ್ತು ವಾಯುವು [ಕೆಲಸಮಾಡುತ್ತಾರೆ]; ಪಂಚಮಃ ಮೃತ್ಯುಃ = ಐದನೆಯವನಾದ ಯಮನು ಧಾವತಿ = ಓಡುತ್ತಾನೆ.

೩. ಇದರ ಭಯದಿಂದ ಅಗ್ನಿಯು ಸುಡುತ್ತಾನೆ, ಸೂರ್ಯನು ಪ್ರಕಾಶಿಸುತ್ತಾನೆ, ಇಂದ್ರನು ಮತ್ತು ವಾಯುವು (ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ); ಐದನೆಯವನಾದ ಯಮನೂ (ಸಹ) ಓಡುತ್ತಾನೆ.

**ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।**
**ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥ ೪ ॥**

ಇಹ = ಇಲ್ಲಿ ಶರೀರಸ್ಯ = ಶರೀರದ ವಿಸ್ರಸಃ = ಪತನದ ಪ್ರಾಕ್ = ಮೊದಲೇ ಬೋದ್ಧುಂ = ತಿಳಿದುಕೊಳ್ಳಲು ಅಶಕತ್ [ಶಕ್ನೋತಿ] ಚೇತ್ = ಶಕ್ತನಾದರೆ [ಸಂಸಾರಬಂಧನಾತ್ ವಿಮುಚ್ಯತೇ = ಸಂಸಾರಬಂಧನದಿಂದ ಮುಕ್ತನಾಗುತ್ತಾನೆ.] ನ ಅಶಕತ್ ಚೇತ್=ಶಕ್ತನಾಗದಿದ್ದರೆ ತತಃ=ಅದರಿಂದ ಸರ್ಗೇಷು ಲೋಕೇಷು= ಸರ್ಗಲೋಕಗಳಲ್ಲಿ ಶರೀರತ್ವಾಯ ಕಲ್ಪತೇ = ಶರೀರವನ್ನು ಹೊಂದಲು ಸಮರ್ಥನಾಗುವನು.

೪. ಶರೀರಪಾತಕ್ಕೆ ಮೊದಲು ಇಲ್ಲಿಯೇ (ಬ್ರಹ್ಮವನ್ನು) ತಿಳಿದುಕೊಳ್ಳಲು ಶಕ್ತನಾದರೆ (ಸಂಸಾರಬಂಧನದಿಂದ ಮುಕ್ತನಾಗುತ್ತಾನೆ). (ಹಾಗೆ

ತಿಳಿದುಕೊಳ್ಳಲು ಅಶಕ್ತನಾದರೆ) ಅದರಿಂದ[1] ಸರ್ಗಲೋಕಗಳಲ್ಲಿ[2] ಶರೀರ ವನ್ನು ಹೊಂದಲು ಸಮರ್ಥನಾಗುವನು.[3]

[[1] ಅಜ್ಞಾನದಿಂದ.
[2] ಪ್ರಾಣಿಗಳು ಸೃಷ್ಟಿಯಾಗುವ ಲೋಕಗಳು.
[3] ಶರೀರವನ್ನು ಹೊಂದುತ್ತಾನೆ.]

**ಯಥಾದರ್ಶೇ ತಥಾತ್ಮನಿ**
**ಯಥಾ ಸ್ವಪ್ನೇ ತಥಾ ಪಿತೃಲೋಕೇ ।**
**ಯಥಾಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ**
**ಛಾಯಾತಪಯೋರಿವ ಬ್ರಹ್ಮಲೋಕೇ ॥ ೫ ॥**

**ಯಥಾ ಆದರ್ಶೇ**=ಕನ್ನಡಿಯಲ್ಲಿ ಹೇಗೊ **ತಥಾ ಆತ್ಮನಿ**=ಹಾಗೆ ಬುದ್ಧಿಯಲ್ಲಿ, **ಯಥಾ ಸ್ವಪ್ನೇ** = ಸ್ವಪ್ನದಲ್ಲಿ ಹೇಗೊ **ತಥಾ ಪಿತೃಲೋಕೇ** = ಹಾಗೆ ಪಿತೃಲೋಕದಲ್ಲಿ **ಯಥಾ ಅಪ್ಸು** = ನೀರಿನಲ್ಲಿ ಹೇಗೊ **ತಥಾ ಗಂಧರ್ವಲೋಕೇ** = ಹಾಗೆ ಗಂಧರ್ವ ಲೋಕದಲ್ಲಿ [**ಆತ್ಮರೂಪಂ** = ಆತ್ಮರೂಪವು] **ಪರಿದದೃಶೇ ಇವ** = ಕಾಣುವಂತೆ; **ಬ್ರಹ್ಮಲೋಕೇ** = ಬ್ರಹ್ಮಲೋಕದಲ್ಲಿ **ಛಾಯಾತಪಯೋಃ ಇವ** = ನೆರಳುಬಿಸಿಲು ಗಳಂತೆ [**ಆತ್ಮರೂಪಂ ಪರಿದೃಶ್ಯತೇ** = ಆತ್ಮರೂಪವು ಕಾಣುತ್ತದೆ].

**೫.** ಕನ್ನಡಿಯಲ್ಲಿ (ತನ್ನ ಮುಖವೇ ಮೊದಲಾದುವು ಸ್ಪಷ್ಟವಾಗಿ ಕಾಣುವಂತೆ) ಬುದ್ಧಿಯಲ್ಲಿ (ಆತ್ಮದರ್ಶನವು ಸ್ಪಷ್ಟವಾಗಿರುತ್ತದೆ); ಸ್ವಪ್ನದಲ್ಲಿ (ವಸ್ತುಗಳು ಅಸ್ಪಷ್ಟವಾಗಿ ಕಾಣುವಂತೆ) ಪಿತೃಲೋಕದಲ್ಲಿ (ಆತ್ಮದರ್ಶನವು ಅಸ್ಪಷ್ಟವಾಗಿರುತ್ತದೆ); ನೀರಿನಲ್ಲಿ (ಪ್ರತಿಬಿಂಬವು ಅಸ್ಪಷ್ಟವಾಗಿ ಕಾಣುವಂತೆ) ಗಂಧರ್ವಲೋಕದಲ್ಲಿ (ಆತ್ಮದರ್ಶನವು ಅಸ್ಪಷ್ಟವಾಗಿರುತ್ತದೆ); ಬ್ರಹ್ಮಲೋಕ ದಲ್ಲಿ ನೆರಳುಬಿಸಿಲುಗಳಂತೆ (ಆತ್ಮದರ್ಶನವು ಸ್ಪಷ್ಟವಾಗಿರುತ್ತದೆ).

[ಹಿಂದಿನ ಮಂತ್ರದಲ್ಲಿ ಶರೀರಪಾತಕ್ಕೆ ಮೊದಲೇ ಆತ್ಮನನ್ನು ಅರಿತುಕೊಳ್ಳ ಬೇಕೆಂದು ಹೇಳಿದ್ದಾಯಿತು. ಏಕೆಂದರೆ ಈ ಲೋಕದಲ್ಲಿ ಮಾತ್ರ ಕನ್ನಡಿಯಲ್ಲಿ ಕಾಣುವ ಮುಖದಂತೆ ಆತ್ಮನನ್ನು ಸ್ಪಷ್ಟವಾಗಿ ಅರಿತುಕೊಳ್ಳಬಹುದು. ಬ್ರಹ್ಮ ಲೋಕದ ಹೊರತು ಇತರ ಲೋಕಗಳಲ್ಲಿ ಆತ್ಮನು ವಿವಿಕ್ತವಾಗಿ ಕಾಣುವುದಿಲ್ಲ. ಆದರೆ ಬ್ರಹ್ಮಲೋಕವನ್ನು ಹೊಂದುವುದು ಕಷ್ಟ. ಆದುದರಿಂದ ಆತ್ಮದರ್ಶನಕ್ಕೆ ಇಲ್ಲಿಯೇ ಪ್ರಯತ್ನಿಸಬೇಕು ಎಂದು ಅಭಿಪ್ರಾಯ.]

**ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।**
**ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ　॥ ೬ ॥**

[ಸ್ವಕಾರಣೇಭ್ಯಃ ಆಕಾಶಾದಿಭ್ಯಃ = ತಮ್ಮ ಕಾರಣಗಳಾದ ಆಕಾಶಾದಿಗಳಿಂದ] **ಪೃಥಕ್** = ಬೇರೆಬೇರೆಯಾಗಿ **ಉತ್ಪದ್ಯಮಾನಾನಾಂ** = ಹುಟ್ಟಿರುವ **ಇಂದ್ರಿಯಾ-ಣಾಂ** = ಇಂದ್ರಿಯಗಳ **ಯತ್ ಪೃಥಗ್ಭಾವಂ** = ಯಾವ ಭಿನ್ನತೆಯನ್ನು **ಉದ-ಯಾಸ್ತಮಯೌ ಚ**=ಮತ್ತು ಉದಯಾಸ್ತಮಯಗಳನ್ನು **ಮತ್ವಾ**=ತಿಳಿದುಕೊಂಡು **ಧೀರಃ** = ವಿವೇಕಿಯು **ನ ಶೋಚತಿ** = ಶೋಕಿಸುವುದಿಲ್ಲ.

೬. (ತಮ್ಮ ಕಾರಣಗಳಾದ ಆಕಾಶಾದಿಗಳಿಂದ) ಬೇರೆ ಬೇರೆಯಾಗಿ ಹುಟ್ಟಿರುವ ಇಂದ್ರಿಯಗಳ ಭಿನ್ನತೆಯನ್ನೂ[೧] ಉದಯಾಸ್ತಮಯಗಳನ್ನೂ[೨] ತಿಳಿದುಕೊಂಡು ವಿವೇಕಿಯು ಶೋಕಿಸುವುದಿಲ್ಲ.

[[೧] ಅತ್ಯಂತ ವಿಶುದ್ಧವೂ ಕೇವಲವೂ ಆದ ಚಿನ್ಮಾತ್ರಸ್ವರೂಪಕ್ಕಿಂತ ಭಿನ್ನವಾದುವು ಗಳೆಂದು.

[೨] ಇಂದ್ರಿಯಗಳ ಉತ್ಪತ್ತಿಲಯಗಳು ಜಾಗ್ರತ್‌ಸುಷುಪ್ತಿಗಳೆಂಬ ಅವಸ್ಥೆಗಳಿಗೆ ಸೇರಿವೆಯೇ ವಿನಾ ಆತ್ಮನಿಗೆ ಸಂಬಂಧಿಸಿಲ್ಲವೆಂದು.]

**ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।**
**ಸತ್ತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥ ೭ ॥**

**ಇಂದ್ರಿಯೇಭ್ಯಃ** = ಇಂದ್ರಿಯಗಳಿಗಿಂತ **ಮನಃ** = ಮನಸ್ಸು **ಪರಂ** = ಶ್ರೇಷ್ಠ ವಾದುದು; **ಮನಸಃ**=ಮನಸ್ಸಿಗಿಂತ **ಸತ್ತ್ವಂ**=ಬುದ್ಧಿಯು **ಉತ್ತಮಂ**=ಉತ್ತಮವು; **ಸತ್ತ್ವಾತ್** = ಬುದ್ಧಿಗಿಂತ **ಮಹಾನ್ ಆತ್ಮಾ** = ಮಹತ್ ಎಂಬ ಆತ್ಮನು **ಅಧಿ** = ಅಧಿಕನು; **ಮಹತಃ**=ಮಹತ್ತಿಗಿಂತ **ಅವ್ಯಕ್ತಂ**=ಅವ್ಯಕ್ತವು **ಉತ್ತಮಂ**=ಉತ್ತಮವು.

೭. ಇಂದ್ರಿಯಗಳಿಗಿಂತ[೧] ಮನಸ್ಸು ಶ್ರೇಷ್ಠವಾದುದು, ಮನಸ್ಸಿಗಿಂತ ಬುದ್ಧಿಯು ಉತ್ತಮವಾದುದು, ಬುದ್ಧಿಗಿಂತ ಮಹತ್ ಎಂಬ ಆತ್ಮನು[೨] ಅಧಿಕನು, ಮಹತ್ತಿಗಿಂತ ಅವ್ಯಕ್ತವು ಉತ್ತಮವು.

[ಇಂದ್ರಿಯಗಳಿಗಿಂತ ಭಿನ್ನನಾದ ಆತ್ಮನು ಹೊರಗಿರುವನೆಂದು ತಿಳಿಯಕೂಡದು. ಅವನು ಹೇಗೆ ಪ್ರತ್ಯಗಾತ್ಮನು ಎಂದು ಇಲ್ಲಿ ಹೇಳಿದೆ. ಈ ಸಂದರ್ಭದಲ್ಲಿ ಮೂರನೆಯ ವಲ್ಲಿಯ ೧೦-೧೧ನೆಯ ಮಂತ್ರಗಳೊಂದಿಗೆ ಹೋಲಿಸಿ ನೋಡಿ.

[೧] ಅರ್ಥಗಳನ್ನೂ ಇಲ್ಲಿ ಗ್ರಹಿಸಬೇಕು.

[೨] ಹೈರಣ್ಯಗರ್ಭತತ್ತ್ವ.]

**ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ।**
**ಯಂ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥ ೮ ॥**

**ತು** = ಆದರೆ **ಅವ್ಯಕ್ತಾತ್** = ಅವ್ಯಕ್ತಕ್ಕಿಂತ **ವ್ಯಾಪಕಃ** = ವ್ಯಾಪಕನಾದ **ಚ** = ಮತ್ತು **ಅಲಿಂಗಃ ಏವ** = ಲಿಂಗವಿಲ್ಲದವನಾದ **ಪುರುಷಃ** = ಪುರುಷನು **ಪರಃ** = ಶ್ರೇಷ್ಠನು. **ಯಂ** = ಯಾವನನ್ನು **ಜ್ಞಾತ್ವಾ**=ತಿಳಿದುಕೊಂಡು **ಜಂತುಃ** = ಜೀವಿಯು **ಮುಚ್ಯತೇ** = ಮುಕ್ತನಾಗುವನು **ಚ** = ಮತ್ತು **ಅಮೃತತ್ವಂ** = ಅಮೃತತ್ವವನು **ಗಚ್ಛತಿ** = ಹೊಂದುತ್ತಾನೆ.

೮. ಆದರೆ ಅವ್ಯಕ್ತಕ್ಕಿಂತ ವ್ಯಾಪಕನಾದ ಲಿಂಗವಿಲ್ಲದವನಾದ[1] ಪುರುಷನೇ ಶ್ರೇಷ್ಠನು; ಅವನನ್ನು ಅರಿತುಕೊಂಡು ಜೀವಿಯು ಮುಕ್ತನಾಗುತ್ತಾನೆ, ಅಮೃತತ್ವವನ್ನೂ ಹೊಂದುತ್ತಾನೆ.

[[1] ಯಾವುದರಿಂದ ಅರಿಯುತ್ತೇವೆಯೊ ಅದಕ್ಕೆ ಲಿಂಗವೆಂದು ಹೆಸರು. ಬುದ್ಧಿಯೇ ಮೊದಲಾದ ಲಿಂಗವು ಆತ್ಮನಿಗೆ ಇಲ್ಲದಿರುವುದರಿಂದ ಇವನು ಅಲಿಂಗನು ಎಂದರೆ ಯಾವ ಸಂಸಾರಧರ್ಮವೂ ಇಲ್ಲದವನು.]

**ನ ಸಂದೃಶೇ ತಿಷ್ಠತಿ ರೂಪಮಸ್ಯ**
**ನ ಚಕ್ಷುಷಾ ಪಶ್ಯತಿ ಕಶ್ಚನೈನಮ್।**
**ಹೃದಾ ಮನೀಷಾ ಮನಸಾಭಿಕ್ಲೃಪ್ತೋ**
**ಯ ಏತದ್ವಿದುರಮೃತಾಸ್ತೇ ಭವಂತಿ ॥ ೯ ॥**

**ಅಸ್ಯ**=ಇವನ **ರೂಪಂ**=ರೂಪವು **ಸಂದೃಶೇ ನ ತಿಷ್ಠತಿ** = ದರ್ಶನಕ್ಕೆ ವಿಷಯವಾಗಿ ಇರುವುದಿಲ್ಲ. **ಏನಂ**=ಇವನನ್ನು **ಕಶ್ಚನ**=ಯಾವನೂ **ಚಕ್ಷುಷಾ**=ಕಣ್ಣಿನಿಂದ **ನ ಪಶ್ಯತಿ** = ನೋಡಲಾರನು. **ಮನೀಷಾ** = ಮನಸ್ಸನ್ನು ನಿಯಮಿಸುವ **ಹೃದಾ** = ಬುದ್ಧಿಯಿಂದ, **ಮನಸಾ** = ಮನನರೂಪವಾದ ಸಮ್ಯಗ್ದರ್ಶನದಿಂದ **ಅಭಿಕ್ಲೃಪ್ತಃ** = ಪ್ರಕಾಶಿತನಾದರೆ [**ಆತ್ಮಾ ಜ್ಞಾತುಂ ಶಕ್ಯತೇ**=ಆತ್ಮನನ್ನು ಅರಿಯಬಹುದು]. **ಯೇ**= ಯಾರು **ಏತತ್** = ಇದನ್ನು **ವಿದುಃ** = ತಿಳಿದುಕೊಳ್ಳುತ್ತಾರೆಯೊ **ತೇ** = ಅವರು **ಅಮೃತಾಃ ಭವಂತಿ** = ಅಮೃತರಾಗುತ್ತಾರೆ.

೯. ಇವನ ರೂಪವು ದೃಗ್ಗೋಚರವಾಗುವುದಿಲ್ಲ. ಇವನನ್ನು ಯಾವನೂ ಕಣ್ಣಿನಿಂದ ನೋಡಲಾರನು. ಮನಸ್ಸನ್ನು ನಿಯಮಿಸುವ ಬುದ್ಧಿಯಿಂದ, ಮನನರೂಪವಾದ ಸಮ್ಯಗ್ದರ್ಶನದಿಂದ (ಆತ್ಮನು) ಪ್ರಕಾಶಿತನಾದರೆ (ಅವನನ್ನು ಆಗ ಅರಿಯಬಹುದು). ಯಾರು ಇದನ್ನು ತಿಳಿದುಕೊಳ್ಳುತ್ತಾರೆಯೊ ಅವರು ಅಮೃತರಾಗುತ್ತಾರೆ.

**ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ।**
**ಬುದ್ಧಿಶ್ಚ ನ ವಿಚೇಷ್ಟತೇ ತಾಮಾಹುಃ ಪರಮಾಂ ಗತಿಮ್ ॥ ೧೦ ॥**

**ಯದಾ**=ಯಾವಾಗ **ಪಂಚ ಜ್ಞಾನಾನಿ**=ಪಂಚಜ್ಞಾನೇಂದ್ರಿಯಗಳು **ಮನಸಾ ಸಹ**=ಮನಸ್ಸಿನೊಂದಿಗೆ **ಅವತಿಷ್ಠಂತೇ**=ನಿಂತಿರುವುವೊ ಎಂದರೆ ಶಾಂತವಾಗುವುವೊ, **ಬುದ್ಧಿಃ ಚ** = ಮತ್ತು ಬುದ್ಧಿಯು **ನ ವಿಚೇಷ್ಟತೇ** = ಅಲ್ಲಾಡುವುದಿಲ್ಲವೊ **ತಾಂ** = ಅದನ್ನು **ಪರಮಾಂ ಗತಿಂ** = ಪರಮಗತಿಯೆಂದು **ಆಹುಃ** = ಹೇಳುತ್ತಾರೆ.

೧೦. ಯಾವಾಗ[೧] ಪಂಚಜ್ಞಾನೇಂದ್ರಿಯಗಳು[೨] ಮನಸ್ಸಿನೊಂದಿಗೆ ಶಾಂತವಾಗುವುವೊ, ಬುದ್ಧಿಯು ಅಲ್ಲಾಡುವುದಿಲ್ಲವೊ[೩] ಅದನ್ನು ಪರಮಗತಿ ಯೆಂದು ಹೇಳುತ್ತಾರೆ.

[ಮನಸ್ಸನ್ನು ನಿಯಮಿಸುವ ಬುದ್ಧಿಯ ಪ್ರಾಪ್ತಿಗೆ ಯೋಗವನ್ನು ಹೇಳಿದೆ.
[೧] ಯಾವ ಕಾಲದಲ್ಲಿ ತಮ್ಮ ವಿಷಯಗಳಿಂದ ಹಿಂತಿರುಗುವುವೊ.
[೨] ಇಂದ್ರಿಯಗಳು ಜ್ಞಾನಕ್ಕೆ ಉಪಯೋಗವಾಗುವುದರಿಂದ ಅವುಗಳನ್ನು 'ಜ್ಞಾನ ಗಳು' ಎಂದು ಕರೆದಿದೆ.
[೩] ತನ್ನ ಕಾರ್ಯದಲ್ಲಿ ತೊಡಗುವುದಿಲ್ಲವೊ.]

**ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।**
**ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ ೧೧ ॥**

**ಸ್ಥಿರಾಂ**=ಸ್ಥಿರವಾದ **ಇಂದ್ರಿಯಧಾರಣಾಂ**=ಇಂದ್ರಿಯಧಾರಣೆಯೆಂಬ **ತಾಂ**= ಈ ಅವಸ್ಥೆಯನ್ನೇ **ಯೋಗಂ ಇತಿ** = ಯೋಗವೆಂದು **ಮನ್ಯಂತೇ** = ತಿಳಿಯುತ್ತಾರೆ. **ತದಾ** = ಆಗ **ಅಪ್ರಮತ್ತಃ ಭವತಿ** = ಪ್ರಮಾದವಿಲ್ಲದವನಾಗಿ ಇರುತ್ತಾನೆ; **ಹಿ** = ಏಕೆಂದರೆ **ಯೋಗಃ** = ಯೋಗವು **ಪ್ರಭವಾಪ್ಯಯೌ** = ಉತ್ಪತ್ತಿನಾಶಗಳುಳ್ಳದ್ದು.

೧೧. ಸ್ಥಿರವಾದ ಇಂದ್ರಿಯಧಾರಣೆ[೧] ಎಂಬ ಈ ಅವಸ್ಥೆಯನ್ನೇ ಯೋಗವೆಂದು ತಿಳಿಯುತ್ತಾರೆ. ಆಗ ಪ್ರಮಾದವಿಲ್ಲದವನಾಗಿ ಇರುತ್ತಾನೆ.[೨] ಏಕೆಂದರೆ ಯೋಗಕ್ಕೆ ಉತ್ಪತ್ತಿನಾಶಗಳುಂಟು.

[[೧] ಒಳಗಿನ ಮತ್ತು ಹೊರಗಿನ ಕರಣಗಳ ಧಾರಣೆ.
[೨] ಬುದ್ಧ್ಯಾದಿಗಳ ವ್ಯಾಪಾರವು ನಿಲ್ಲುವುದಕ್ಕೆ ಮೊದಲೇ.]

**ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।**
**ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥ ೧೨ ॥**

[ಬ್ರಹ್ಮ=ಬ್ರಹ್ಮವು] **ವಾಚಾ**=ಮಾತಿನಿಂದ **ಪ್ರಾಪ್ತುಂ**=ಹೊಂದಲು **ನ ಏವ ಶಕ್ಯಃ**=ಶಕ್ಯವಲ್ಲ, **ಮನಸಾ ನ**=ಮನಸ್ಸಿನಿಂದಲೂ ಆಗುವುದಿಲ್ಲ, **ಚಕ್ಷುಷಾ ನ**=ಕಣ್ಣಿನಿಂದಲೂ ಆಗುವುದಿಲ್ಲ; **ಅಸ್ತಿ ಇತಿ**=ಇದ್ದಾನೆ ಎಂದು **ಬ್ರುವತಃ**=ಹೇಳುವವನನ್ನು ಬಿಟ್ಟು **ಅನ್ಯತ್ರ**=ಇತರರಲ್ಲಿ **ತತ್**=ಅದು **ಕಥಂ ಉಪಲಭ್ಯತೇ**=ಹೇಗೆ ಲಭ್ಯವಾಗುವುದು?

**೧೨.** (ಬ್ರಹ್ಮವು) ಮಾತಿನಿಂದಾಗಲಿ ಮನಸ್ಸಿನಿಂದಾಗಲಿ ಕಣ್ಣಿನಿಂದಾಗಲಿ ಹೊಂದಲು ಶಕ್ಯವಲ್ಲ. ಇದ್ದಾನೆ ಎಂದು ಹೇಳುವವನನ್ನು[೧] ಬಿಟ್ಟು ಇತರರಲ್ಲಿ[೨] ಅದು ಹೇಗೆ ಲಭ್ಯವಾಗುವುದು?

[ಬ್ರಹ್ಮದ ಉಪಲಬ್ಧಿಗೆ ಯಾವ ಕರಣವೂ ಇಲ್ಲದಿರುವುದರಿಂದ ಬ್ರಹ್ಮವು ಇಲ್ಲವೇ ಇಲ್ಲ ಎಂಬ ಆಕ್ಷೇಪಕ್ಕೆ ಪರಿಹಾರವನ್ನು ಹೇಳಿದೆ. ಜಗತ್ತಿಗೆ ಮೂಲವೇ ಇಲ್ಲದಿದ್ದರೆ ಅದು ಅಸತ್ತಿನಿಂದಲೇ ಅನ್ವಿತವಾಗಿ 'ಇಲ್ಲ' ಎಂದು ಅರಿಯಬೇಕಾಗುತ್ತಿತ್ತು; ಆದರೆ ಹಾಗಿರುವುದಿಲ್ಲ; 'ಇದೆ' ಎಂದೇ ತಿಳಿಯಬರುತ್ತದೆ. ಆದುದರಿಂದ ಜಗತ್ತಿಗೆ ಮೂಲವಾದ ಬ್ರಹ್ಮವು ಇದೆ ಎಂದೇ ತಿಳಿಯಬೇಕು.

[೧] ಶ್ರದ್ಧಾನ್ವಿತನಾದ ಆಸ್ತಿಕವಾದಿಯನ್ನು.

[೨] 'ಜಗತ್ತಿಗೆ ಮೂಲವಾದ ಆತ್ಮನು ಇಲ್ಲ; ಈ ಕಾರ್ಯವು ಯಾವುದರಿಂದಲೂ ಅನ್ವಯವಾಗಿಲ್ಲ. ಅದು ಅಭಾವಾಂತವಾಗಿ ಲಯವಾಗುತ್ತದೆ' ಎಂದು ತಿಳಿದಿರುವ ನಾಸ್ತಿಕವಾದಿಗೆ ವಿಪರೀತದರ್ಶಿಗೆ ಆ ಬ್ರಹ್ಮವು ತತ್ತ್ವತಃ ಹೇಗೆ ಲಭ್ಯವಾಗುತ್ತದೆ? ಉಪಲಭ್ಯವಾಗುವುದಿಲ್ಲ ಎಂದರ್ಥ.]

**ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।**
**ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥ ೧೩ ॥**

**ಅಸ್ತಿ ಇತಿ ಏವ**=ಇದ್ದಾನೆ ಎಂದೇ **ಉಪಲಬ್ಧವ್ಯಃ**=ತಿಳಿಯತಕ್ಕದ್ದು, **ತತ್ತ್ವಭಾವೇನ ಚ**=ತತ್ತ್ವಭಾವದಿಂದಲೂ [ತಿಳಿಯತಕ್ಕದ್ದು]; **ಉಭಯೋಃ**=ಇವೆರಡಲ್ಲಿ **ಅಸ್ತಿ ಇತಿ ಏವ**=ಇದ್ದಾನೆ ಎಂದೇ **ಉಪಲಬ್ಧಸ್ಯ**=ಉಪಲಬ್ಧಿ ಹೊಂದಿದವನ **ತತ್ತ್ವಭಾವಃ**=ತತ್ತ್ವಭಾವವು **ಪ್ರಸೀದತಿ**=ಪ್ರಸನ್ನವಾಗುವುದು.

**೧೩.** 'ಇದ್ದಾನೆ' ಎಂದೇ ತಿಳಿಯತಕ್ಕದ್ದು,[೧] ತತ್ತ್ವಭಾವದಿಂದಲೂ[೨] (ತಿಳಿಯತಕ್ಕದ್ದು); ಇವೆರಡರಲ್ಲಿ[೩] 'ಇದ್ದಾನೆ' ಎಂದು ಉಪಲಬ್ಧಿಹೊಂದಿದವನ ತತ್ತ್ವಭಾವವು ಪ್ರಸನ್ನವಾಗುವುದು.[೪]

[[೧] ಸತ್ಕಾರ್ಯವಾದ ಬುದ್ಧ್ಯಾದಿ ಉಪಾಧಿಗಳಿಂದ ಕೂಡಿದ ಆತ್ಮನು ಇದ್ದಾನೆ ಎಂದು ತಿಳಿಯತಕ್ಕದ್ದು.

[2] ನಿರುಪಾಧಿಕವಾದ, ಅಲಿಂಗವಾದ, 'ಸತ್' 'ಅಸತ್' ಮೊದಲಾದ ಪ್ರತ್ಯಯಗಳಿಗೆ ವಿಷಯವಾಗದ ಆತ್ಮನ ತತ್ತ್ವಭಾವ.

[3] ಸೋಪಾಧಿಕವಾದ ಅಸ್ತಿತ್ವ, ನಿರುಪಾಧಿಕವಾದ ತತ್ತ್ವಭಾವ.

[4] ಆತ್ಮಪ್ರಕಾಶಕ್ಕೆ ಅಭಿಮುಖವಾಗುವುದು.]

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ ೧೪ ॥**

ಯದಾ=ಯಾವಾಗ ಅಸ್ಯ=ಇವನ ಹೃದಿ=ಬುದ್ಧಿಯಲ್ಲಿ ಶ್ರಿತಾಃ=ಆಶ್ರಯಿಸಿಕೊಂಡಿರುವ ಯೇ ಸರ್ವೇ ಕಾಮಾಃ=ಎಲ್ಲ ಕಾಮಗಳು ಪ್ರಮುಚ್ಯಂತೇ=ನಾಶವಾಗುವುವೊ ಅಥ=ಆಗ ಮರ್ತ್ಯಃ=ಮರ್ತ್ಯನು ಅಮೃತಃ ಭವತಿ=ಅಮೃತನಾಗುತ್ತಾನೆ, ಅತ್ರ=ಇಲ್ಲಿಯೇ ಬ್ರಹ್ಮ=ಬ್ರಹ್ಮವನ್ನು ಸಮಶ್ನುತೇ=ಹೊಂದುತ್ತಾನೆ.

**೧೪.** ಈತನ ಬುದ್ಧಿಯನ್ನು ಆಶ್ರಯಿಸಿಕೊಂಡಿರುವ ಕಾಮಗಳೆಲ್ಲ ಯಾವಾಗ ನಾಶವಾಗುವುವೊ ಆಗ ಮರ್ತ್ಯನು[1] ಅಮೃತನಾಗುತ್ತಾನೆ,[2] ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ.[3]

[[1] ಜ್ಞಾನೋತ್ಪತ್ತಿಗೆ ಮೊದಲು ಮರಣಕ್ಕೆ ಅಧೀನನಾದವನು.

[2] ಅವಿದ್ಯಾಕಾಮಕರ್ಮರೂಪವಾದ ಮೃತ್ಯುವು ನಾಶವಾದುದರಿಂದ.

[3] ಬ್ರಹ್ಮವೇ ಆಗುತ್ತಾನೆ.]

**ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।**
**ಅಥ ಮರ್ತ್ಯೋಽಮೃತೋ ಭವತ್ಯೇತಾವದ್ಧ್ಯನುಶಾಸನಮ್ ॥ ೧೫ ॥**

ಯದಾ=ಯಾವಾಗ ಹೃದಯಸ್ಯ=ಬುದ್ಧಿಯ ಸರ್ವೇ ಗ್ರಂಥಯಃ=ಎಲ್ಲ ಗ್ರಂಥಿಗಳು ಇಹ=ಇಲ್ಲಿಯೇ ಪ್ರಭಿದ್ಯಂತೇ=ನಾಶವಾಗುವುವೊ ಅಥ=ಆಗ ಮರ್ತ್ಯಃ ಅಮೃತಃ ಭವತಿ=ಮರ್ತ್ಯನು ಅಮೃತನಾಗುವನು. ಏತಾವತ್ ಹಿ=ಇಷ್ಟೇ ಅನುಶಾಸನಂ=ಉಪದೇಶವು.

**೧೫.** ಯಾವಾಗ ಬುದ್ಧಿಯ ಗ್ರಂಥಿಗಳೆಲ್ಲ[1] ಇಲ್ಲಿಯೇ ನಾಶವಾಗುವುವೊ ಆಗ ಮರ್ತ್ಯನು ಅಮೃತನಾಗುವನು; ಇಷ್ಟೇ ಉಪದೇಶವು.[2]

[[1] 'ಈ ಶರೀರ ನಾನು', 'ನಾನು ಸುಖಿ' ಮೊದಲಾದ ಅವಿದ್ಯೆಯ ಪ್ರತ್ಯಯಗಳು.

[2] ಇದೇ ಎಲ್ಲ ಉಪನಿಷತ್ತುಗಳ ಉಪದೇಶ.]

**ಶತಂ ಚೈಕಾ ಚ ಹೃದಯಸ್ಯ ನಾಡ್ಯ-**
**ಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥ ೧೬ ॥**

**ಶತಂ ಚ** = ನೂರು **ಏಕಾ ಚ** = ಮತ್ತು ಒಂದು **ಹೃದಯಸ್ಯ** = ಹೃದಯದ **ನಾಡ್ಯಃ** = ನಾಡಿಗಳು [**ಸಂತಿ** = ಇವೆ]; **ತಾಸಾಂ** = ಅವುಗಳಲ್ಲಿ **ಏಕಾ** = ಒಂದು **ಮೂರ್ಧಾನಂ** [**ಭಿತ್ವಾ**] **ಅಭಿನಿಃಸೃತಾ** = ನೆತ್ತಿಯನ್ನು [ಭೇದಿಸಿಕೊಂಡು] ಹೊರ-ಟಿರುವುದು; **ತಯಾ** = ಅದರ ಮೂಲಕ **ಊರ್ಧ್ವಂ** = ಮೇಲಕ್ಕೆ **ಆಯನ್** = ಹೋಗುವವನು **ಅಮೃತತ್ವಂ** = ಅಮೃತತ್ವವನ್ನು **ಏತಿ** = ಪಡೆಯುತ್ತಾನೆ. **ವಿಷ್ವಕ್** = ಎಲ್ಲ ಕಡೆಯಲ್ಲಿಯೂ ಹರಡಿರುವ **ಅನ್ಯಾಃ** [**ನಾಡ್ಯಃ**] = ಇತರ ನಾಡಿಗಳು **ಉತ್ಕ್ರಮಣೇ ಭವಂತಿ** = ಸಂಸಾರಪ್ರಾಪ್ತಿಗೆ ಕಾರಣವಾಗುತ್ತವೆ.

೧೬. ಹೃದಯಕ್ಕೆ ನೂರೊಂದು[1] ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯನ್ನು ಭೇದಿಸಿಕೊಂಡು ಹೊರಟಿರುವುದು. ಅದರ ಮೂಲಕ[2] ಮೇಲಕ್ಕೆ ಹೋಗುವವನು ಅಮೃತತ್ವವನ್ನು[3] ಪಡೆಯುತ್ತಾನೆ. ಎಲ್ಲ ಕಡೆಯಲ್ಲಿಯೂ ಹರಡಿರುವ ಇತರ ನಾಡಿಗಳು ಸಂಸಾರಕ್ಕೆ ಕಾರಣವಾಗುತ್ತವೆ.

[ಜೀವಂತನಾಗಿರುವಾಗಲೇ ಬ್ರಹ್ಮಭೂತನಾದ ಜ್ಞಾನಿಗೆ ಶರೀರವನ್ನು ಬಿಟ್ಟು ಹೋಗುವುದೆಂಬುದೇ ಇಲ್ಲ. ಏಕೆಂದರೆ ಅವನು 'ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ' ಎಂದು ಕಠಶ್ರುತಿಯೇ ಹೇಳಿದೆ (೨, ೬, ೧೪). ಆದರೆ ಇತರ ವಿದ್ಯೆಗಳನ್ನು ಉಪಾಸನೆಮಾಡುತ್ತ ಅಪರಬ್ರಹ್ಮವನ್ನು ಅರಿತವರಾಗಿ (ಮಂದಬ್ರಹ್ಮವಿದಃ) ಬ್ರಹ್ಮಲೋಕವನ್ನು ಹೊಂದುವವರ ಗತಿ ಎಂಥದೆಂಬುದನ್ನು ಪ್ರಕೃತವಾದ ಪರಬ್ರಹ್ಮ-ವಿದ್ಯಾ ಫಲಸ್ತುತಿಗಾಗಿ ಇಲ್ಲಿ ಹೇಳಿದೆ.

[1] ನೂರೊಂದನೆಯ ನಾಡಿಗೆ ಸುಷುಮ್ನಾ ಎಂದು ಹೆಸರು.

[2] ಮರಣಕಾಲದಲ್ಲಿ ಅದರ ಮೂಲಕ ಮನಸ್ಸನ್ನು ವಶಮಾಡಿಕೊಳ್ಳಬೇಕು.

[3] ಆದಿತ್ಯನ ಮೂಲಕವಾಗಿ ಆಪೇಕ್ಷಿಕವಾದ ಅಮರಣಧರ್ಮತ್ವವನ್ನು ಹೊಂದುತ್ತಾನೆ. ಏಕೆಂದರೆ ಭೂತಗಳು ಪ್ರಳಯವಾಗುವ ವರೆಗೆ ಇರುವ ಸ್ಥಾನವನ್ನು ಅಮೃತತ್ವವೆಂದು ವಿಷ್ಣುಪುರಾಣವು (೨, ೮, ೯೭) ಹೇಳುತ್ತದೆ; ಅಥವಾ ಅನುಪಮವಾದ ಭೋಗಗಳನ್ನು ಬ್ರಹ್ಮಲೋಕದಲ್ಲಿ ಅನುಭವಿಸಿದ ಮೇಲೆ ಬ್ರಹ್ಮನೊಂದಿಗೆ ಕಾಲಾಂತರದಲ್ಲಿ ಮುಖ್ಯವಾದ ಅಮೃತತ್ವವನ್ನೇ ಪಡೆಯುತ್ತಾನೆ ಎಂದೂ ಅರ್ಥವನ್ನು ಮಾಡಬಹುದು.]

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ
ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ತಂ ಸ್ವಾಚ್ಛರೀರಾತ್ ಪ್ರವೃಹೇ-
ನ್ಮುಂಜಾದಿವೇಷೀಕಾಂ ಧೈರ್ಯೇಣ ।
ತಂ ವಿದ್ಯಾಚ್ಛುಕ್ರಮಮೃತಂ
ತಂ ವಿದ್ಯಾಚ್ಛುಕ್ರಮಮೃತಮಿತಿ ॥ ೧೭ ॥

ಅಂಗುಷ್ಠಮಾತ್ರಃ = ಅಂಗುಷ್ಠಪರಿಮಾಣವುಳ್ಳವನಾದ ಅಂತರಾತ್ಮಾ = ಅಂತರಾತ್ಮನಾದ ಪುರುಷಃ = ಪುರುಷನು ಜನಾನಾಂ = ಜನರ ಹೃದಯೇ = ಹೃದಯದಲ್ಲಿ ಸದಾ = ಯಾವಾಗಲೂ ಸನ್ನಿವಿಷ್ಟಃ = ಇರುತ್ತಾನೆ. ಮುಂಜಾತ್ = ಮುಂಜವೆಂಬ ಹುಲ್ಲಿನಿಂದ ಇಷೀಕಾಂ ಇವ = ದಂಟನ್ನು ತೆಗೆಯುವಂತೆ ತಂ = ಅವನನ್ನು ಸ್ವಾತ್ = ತನ್ನ ಶರೀರಾತ್ = ಶರೀರದಿಂದ ಧೈರ್ಯೇಣ = ಧೈರ್ಯವಾಗಿ ಪ್ರವೃಹೇತ್ = ಬೇರ್ಪಡಿಸಬೇಕು. ತಂ = ಅವನನ್ನು ಶುಕ್ರಂ = ಶುದ್ಧನೆಂದೂ ಅಮೃತಂ = ಅಮೃತನೆಂದೂ ವಿದ್ಯಾತ್ = ತಿಳಿದುಕೊಳ್ಳಬೇಕು; ತಂ ಶುಕ್ರಂ ಅಮೃತಂ ವಿದ್ಯಾತ್ ಇತಿ = ಅವನನ್ನು ಶುದ್ಧನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು ಎಂದು.

೧೭. ಅಂಗುಷ್ಠಪರಿಮಾಣವುಳ್ಳವನೂ ಅಂತರಾತ್ಮನೂ ಆದ ಪುರುಷನು ಜನರ ಹೃದಯದಲ್ಲಿ ಯಾವಾಗಲೂ ಇರುತ್ತಾನೆ. ಮುಂಜವೆಂಬ ಹುಲ್ಲಿನಿಂದ ದಂಟನ್ನು ತೆಗೆಯುವಂತೆ ಅವನನ್ನು ತನ್ನ ಶರೀರದಿಂದ ಧೈರ್ಯವಾಗಿ ಬೇರ್ಪಡಿಸಬೇಕು. ಅವನನ್ನು ಶುದ್ಧನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು. ಅವನನ್ನು ಶುದ್ಧನೆಂದೂ ಅಮೃತನೆಂದೂ ತಿಳಿದುಕೊಳ್ಳಬೇಕು ಎಂದು.

[ಈ ಮಂತ್ರದಲ್ಲಿ ಎಲ್ಲ ವಲ್ಲಿಗಳ ಅರ್ಥವನ್ನೂ ಉಪಸಂಹಾರ ಮಾಡಿದೆ.]

ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ
ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ ।
ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯು-
ರನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥ ೧೮ ॥

ಅಥ = ಅನಂತರ ಮೃತ್ಯುಪ್ರೋಕ್ತಾಂ = ಮೃತ್ಯುವಿನಿಂದ ಹೇಳಲ್ಪಟ್ಟ ಏತಾಂ = ಈ ವಿದ್ಯಾಂ = ಬ್ರಹ್ಮವಿದ್ಯೆಯನ್ನೂ ಚ = ಮತ್ತು ಕೃತ್ಸ್ನಂ = ಸಂಪೂರ್ಣವಾದ

**ಯೋಗವಿಧಿಂ**=ಯೋಗವಿಧಿಯನ್ನೂ **ಲಬ್ಧ್ವಾ**=ಹೊಂದಿ **ನಚಿಕೇತಃ**=ನಚಿಕೇತನು **ವಿರಜಃ** = ವಿಗತರಜನಾಗಿ **ವಿಮೃತ್ಯುಃ** = ಮೃತ್ಯುವಿಲ್ಲದವನಾಗಿ **ಬ್ರಹ್ಮಪ್ರಾಪ್ತಃ ಅಭೂತ್** = ಬ್ರಹ್ಮವನ್ನು ಪಡೆದುಕೊಂಡನು. **ಅನ್ಯಃ ಅಪಿ ಯಃ** = ಮತ್ತೊಬ್ಬ ಯಾವನು **ಅಧ್ಯಾತ್ಮಂ ಏವ**=ಅಧ್ಯಾತ್ಮವನ್ನೇ **ಏವಂ ವಿತ್**=ಹೀಗೆ ತಿಳಿದುಕೊಳ್ಳುತ್ತಾನೆಯೊ [ಅವನೂ ಮುಕ್ತನಾಗುತ್ತಾನೆ].

**೧೮.** ಅನಂತರ ನಚಿಕೇತನು ಮೃತ್ಯುವಿನಿಂದ ಹೇಳಲ್ಪಟ್ಟ ಈ ಬ್ರಹ್ಮವಿದ್ಯೆಯನ್ನೂ ಸಂಪೂರ್ಣವಾದ[೧] ಯೋಗವಿಧಿಯನ್ನೂ ಹೊಂದಿ, ವಿಗತರಜನಾಗಿ,[೨] ವಿಮೃತ್ಯುವಾಗಿ,[೩] ಬ್ರಹ್ಮವನ್ನು ಪಡೆದುಕೊಂಡನು.[೪] ಮತ್ತೊಬ್ಬ ಯಾವನು[೫] ಅಧ್ಯಾತ್ಮವನ್ನೇ ಹೀಗೆ ತಿಳಿದುಕೊಳ್ಳುತ್ತಾನೆಯೊ (ಅವನೂ ಮುಕ್ತನಾಗುವನು).

[[೧] ಉಪಕರಣಗಳೊಂದಿಗೆ ಮತ್ತು ಫಲದೊಂದಿಗೆ.

[೨] ಧರ್ಮಾಧರ್ಮಗಳ ಸೋಂಕು ಇಲ್ಲದವನಾಗಿ.

[೩] ಅವಿದ್ಯಾಕಾಮಗಳಿಲ್ಲದವನಾಗಿ.

[೪] ಮುಕ್ತನಾದನು.

[೫] ನಚಿಕೇತನು ಮಾತ್ರವೇ ಅಲ್ಲ, ಇತರರೂ ಕೂಡ ಹೀಗೆ ತಿಳಿದುಕೊಂಡು ಮುಕ್ತಿಯನ್ನು ಹೊಂದಬಹುದು.]

ಅತಸೀಗುಚ್ಛಸಚ್ಛಾಯಮಂಚಿತೋರಸ್ಥಲಂ ಶ್ರಿಯಾ ।
ಅಂಜನಾಚಲಶೃಂಗಾರಮಂಜಲಿರ್ಮಮ ಗಾಹತಾಮ್ ॥

ವ್ಯಾಸಂ ಲಕ್ಷ್ಮಣಯೋಗೀಂದ್ರಂ ಪ್ರಣಮ್ಯಾನ್ಯಾನ್ ಗುರೂನಪಿ ।
ವ್ಯಾಖ್ಯಾಸ್ಯೇ ವಿದುಷಾಂ ಪ್ರೀತ್ಯೈ ಕಠವಲ್ಲೀಂ ಯಥಾಮತಿ ॥

# ಕಠೋಪನಿಷತ್

## ಮೊದಲನೆಯ ಅಧ್ಯಾಯ

### ಮೊದಲನೆಯ ವಲ್ಲೀ

೧. ವಾಜಶ್ರವಸನು (ಫಲವನ್ನು) ಇಚ್ಛಿಸುವವನಾಗಿ[೧] ಸರ್ವಸ್ವವನ್ನೂ ಕೊಟ್ಟನು. ಅವನಿಗೆ ನಚಿಕೇತನೆಂಬ ಮಗನಿದ್ದನು.

[[೧] ಕರ್ಮವು ಕಾಮ್ಯವಾದುದರಿಂದ ದಕ್ಷಿಣೆಯ ಸಾದ್ಗುಣ್ಯವು ಆವಶ್ಯಕವೆಂದು 'ಉಶನ್' ಎಂಬ ಪದದಿಂದ ತಿಳಿದುಬರುತ್ತದೆ.]

೨. (ಋತ್ವಿಕ್ಕುಗಳಿಗೆ) ದಕ್ಷಿಣೆಗಳನ್ನು ಕೊಡುತ್ತಿರುವಾಗ ಕುಮಾರನಾದ ಅವನನ್ನು ಶ್ರದ್ಧೆಯು ಪ್ರವೇಶಿಸಿತು. ಅವನು (ಹೀಗೆ) ಯೋಚಿಸಿದನು.

೩. ನೀರು ಕುಡಿದ, ಹುಲ್ಲು ಮೇದ, ಹಾಲು ಕರೆದ, ನಿರಿಂದ್ರಿಯಗಳಾದ ಹಸುಗಳನ್ನು ಕೊಡುವವನು ಅಸಂದ ಎಂಬ ಆ ಲೋಕಗಳಿಗೆ ಹೋಗುತ್ತಾನೆ.

೪. 'ತಂದೆಯೆ, ನನ್ನನ್ನು ಯಾರಿಗೆ ಕೊಡುತ್ತೀಯೆ?' ಎಂದು (ತನ್ನ) ತಂದೆಯನ್ನು ಅವನು ಕೇಳಿದನು;[೧] ಎರಡನೆಯ ಸಲವೂ ಮೂರನೆಯ ಸಲವೂ (ಹೀಗೆ ಪುನಃ ಪ್ರಶ್ನಿಸಿದನು). 'ನಿನ್ನನ್ನು ಮೃತ್ಯುವಿಗೆ ಕೊಡುತ್ತೇನೆ' ಎಂದು (ತಂದೆಯು) ಅವನಿಗೆ ಹೇಳಿದನು.

[[೧] ಆಸ್ತಿಕಾಗ್ರೇಸರನಾದ ನಚಿಕೇತನು ತನ್ನ ತಂದೆಯು ಕೊಡುತ್ತಿದ್ದ ದಕ್ಷಿಣೆಗಳ ದೋಷವನ್ನು ತಿಳಿದವನಾಗಿ, ಸ್ವಾತ್ಮದಾನದಿಂದಾದರೂ ಯಜ್ಞದ ಸಾದ್ಗುಣ್ಯವನ್ನು ಇಚ್ಛಿಸುತ್ತ ಅವನ ಸಮೀಪಕ್ಕೆ ಹೋಗಿ ಹೇಳಿದನು.]

೫. (ಯಮಸದನಕ್ಕೆ ಹೋಗುವ) ಬಹುಜನರಲ್ಲಿ ನಾನು ಮುಂದುಗಡೆ ಹೋಗುತ್ತೇನೆ ಅಥವಾ ಬಹುಜನರ ಮಧ್ಯದಲ್ಲಿ ಹೋಗುತ್ತೇನೆ.[೧] ಈಗ ನನ್ನ ಮೂಲಕ ಮಾಡುವ ಯಮನ ಯಾವ ಕರ್ತವ್ಯವಿರಬಹುದು?[೨]

[[೧] ಕೊನೆಯಲ್ಲಿ ಎಂದಿಗೂ ಹೋಗುವುದಿಲ್ಲ. ಮೃತ್ಯುಸದನಕ್ಕೆ ಹೋಗುವ ವಿಚಾರದಲ್ಲಿ ಅವನಿಗೆ ಯಾವ ಯೋಚನೆಯೂ ಇಲ್ಲ ಎಂದರ್ಥ.

[2] ಹಾಗಾದರೆ ಅವನ ಯೋಚನೆಯೇನು? ಋತ್ವಿಕ್ಕುಗಳಿಗೆ ನಚಿಕೇತನನ್ನು ಕೊಟ್ಟರೆ ಹೇಗೋ ಹಾಗೆ ಬಾಲಕನಾದ ಇವನನ್ನು ಪೂರ್ಣಕಾಮನಾದ ಯಮನಿಗೆ ಕೊಟ್ಟರೆ ಏನು ಪ್ರಯೋಜನವಾಗುವುದು? ಇದೇ ಇವನ ಯೋಚನೆ.]

೬. ಪೂರ್ವಿಕರು ಹೇಗೆ (ಇದ್ದರೆಂದು) ನೋಡು. ಹಾಗೆಯೇ ಇತರರೂ (ಹೇಗಿದ್ದಾರೆಂಬುದನ್ನು) ನೋಡು. ಮನುಷ್ಯನು ಸಸ್ಯದಂತೆ ಪಕ್ವವಾಗುತ್ತಾನೆ, ಸಸ್ಯದಂತೆ ಪುನಃ ಹುಟ್ಟುತ್ತಾನೆ.[1]

[[1] 'ಅನಿತ್ಯವಾದ ಜೀವಲೋಕದಲ್ಲಿ ಸುಳ್ಳು ಹೇಳಿದರೆ ಆಗುವ ಪ್ರಯೋಜನವೇನು? ಸತ್ಯವನ್ನು ಪಾಲಿಸಿ ನನ್ನನ್ನು ಮೃತ್ಯುವಿಗೆ ಕಳುಹಿಸು' ಎಂದು ಭಾವ.]

೭. (ಸಾಕ್ಷಾತ್) ಅಗ್ನಿಯೇ ಬ್ರಾಹ್ಮಣನಾದ ಅತಿಥಿಯಾಗಿ ಮನೆಗಳನ್ನು ಪ್ರವೇಶಿಸುತ್ತಾನೆ. ಅವನಿಗೆ ಈ ಶಾಂತಿಯನ್ನು[1] ಮಾಡುತ್ತಾರೆ. ಹೇ ಯಮನೆ, ನೀರನ್ನು (ಪಾದ್ಯಕ್ಕಾಗಿ) ತೆಗೆದುಕೊಂಡು ಬಾ.

[[1] ಅಗ್ನಿಗೆ ಮಾಡಿದ ಅಪಚಾರದಿಂದ ತಾವೇ ಸುಟ್ಟುಹೋಗದಿರಲಿ ಎಂದು ಸಂತರು ಅವನಿಗೆ ಪಾದ್ಯಾಸನಾದಿ ಲಕ್ಷಣವುಳ್ಳ ಶಾಂತಿಯನ್ನು ಮಾಡುತ್ತಾರೆ.]

೮. ಯಾವನ ಮನೆಯಲ್ಲಿ ಬ್ರಾಹ್ಮಣನು ಊಟವಿಲ್ಲದೆ ವಾಸಿಸುವನೊ, ಆ ಅಲ್ಪಬುದ್ಧಿಯುಳ್ಳ ಪುರುಷನ ಆಶಾಪ್ರತೀಕ್ಷೆಗಳು,[1] ಸತ್ಸಂಗ, ಸತ್ಯವೂ ಪ್ರಿಯವೂ ಆದ ಮಾತು, ಇಷ್ಟಾಪೂರ್ತಗಳು,[2] ಎಲ್ಲ ಪುತ್ರಪಶುಗಳು—ಇವೆಲ್ಲವನ್ನೂ ಇದು[3] ನಾಶಮಾಡುತ್ತದೆ.

[[1] ಕಾಮ ಮತ್ತು ಸಂಕಲ್ಪ; ಅಥವಾ ಅನುತ್ಪನ್ನವಸ್ತುಗಳನ್ನು ಬಯಸುವುದಕ್ಕೆ ಆಶೆಯೆಂದೂ ಉತ್ಪನ್ನವಸ್ತುಗಳನ್ನು ಹೊಂದುವುದಕ್ಕೆ ಪ್ರಾಪ್ತಿಯೆಂದೂ ಹೆಸರು.
[2] ಯಾಗಾದಿಗಳು 'ಇಷ್ಟ', ಕೆರೆಬಾವಿಗಳನ್ನು ಕಟ್ಟಿಸುವುದು 'ಪೂರ್ತ'.
[3] ಊಟಮಾಡಿಸದಿರುವುದೆಂಬ ಪಾಪ.]

೯. (ಯಮ): ಹೇ ಬ್ರಾಹ್ಮಣ, ಅತಿಥಿಯೂ ನಮಸ್ಕಾರಾರ್ಹನೂ ಆದ (ನೀನು) ನನ್ನ ಮನೆಯಲ್ಲಿ ಮೂರು ರಾತ್ರಿಗಳು ಊಟಮಾಡದೆ ವಾಸಿಸಿರುವುದರಿಂದ ನಿನಗೆ ನಮಸ್ಕಾರವಿರಲಿ. ನನಗೆ ಮಂಗಳವಾಗಲಿ; ನೀನು ಮೂರು (ರಾತ್ರಿಗಳಿಗೆ) ವರಗಳನ್ನು ಪ್ರಾರ್ಥಿಸು.[1]

[[1] ನಚಿಕೇತನಿಗೆ ಯಾವ ಬಯಕೆಯೂ ಇಲ್ಲದಿದ್ದರೂ ಯಮನ ಅನುಗ್ರಹಕ್ಕಾಗಿ.]

**೧೦.** (ನಚಿಕೇತ): ಹೇ ಮೃತ್ಯು, ನನ್ನ ವಿಷಯದಲ್ಲಿ ಗೌತಮನು ಶಾಂತಸಂಕಲ್ಪನೂ ಪ್ರಸನ್ನಚಿತ್ತನೂ ಕ್ರೋಧರಹಿತನೂ ಆಗಲಿ; ಮತ್ತು ನಿನ್ನಿಂದ ಕಳುಹಿಸಲ್ಪಟ್ಟ ನನ್ನೊಂದಿಗೆ (ಹಿಂದಿನಂತೆ) ಪ್ರೀತನಾಗಿ ಮಾತನಾಡಿಸಲಿ;[೧] ಮೂರು ವರಗಳಲ್ಲಿ ಈ ಮೊದಲನೆಯ ವರವನ್ನು ಪ್ರಾರ್ಥಿಸುತ್ತೇನೆ.

[[೧] ಅಥವಾ 'ಆಶೀರ್ವಾದವನ್ನು ಮಾಡಲಿ' (ಅಭಿವದೇತ್) ಎಂದು ಅರ್ಥವನ್ನು ಮಾಡಬಹುದು.]

**೧೧.** (ಯಮ): ಔದ್ದಾಲಕಿ ಆರುಣಿಯು ನನ್ನ ಅನುಗ್ರಹದಿಂದ ಹಿಂದಿನಂತೆ ನಿನ್ನಲ್ಲಿ ಸಂತುಷ್ಟನಾಗುತ್ತಾನೆ. ಮೃತ್ಯುಮುಖದಿಂದ ಬಿಡಲ್ಪಟ್ಟ ನಿನ್ನನ್ನು ನೋಡಿ ಕೋಪವಿಲ್ಲದವನಾಗಿ ರಾತ್ರಿಗಳಲ್ಲಿ ಸುಖವಾಗಿ ಮಲಗುತ್ತಾನೆ.

**೧೨.** (ನಚಿಕೇತ): ಸ್ವರ್ಗಲೋಕದಲ್ಲಿ ಯಾವ ಭಯವೂ ಇರುವುದಿಲ್ಲ. ನೀನು ಅಲ್ಲಿಲ್ಲ. ಮುಪ್ಪಿನಿಂದ ಯಾವನೂ ಹೆದರುವುದಿಲ್ಲ. ಹಸಿವು ಬಾಯಾರಿಕೆಗಳೆರಡನ್ನು ದಾಟಿ, ಶೋಕವನ್ನು ಮೀರಿ ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ.

[ನಚಿಕೇತನು ಈ ಎರಡು ಮಂತ್ರಗಳಲ್ಲಿ (೧೨-೧೩) ಎರಡನೆಯ ವರವನ್ನು ಬೇಡುತ್ತಾನೆ. ಇಲ್ಲಿ ಸ್ವರ್ಗಶಬ್ದವು ಮೋಕ್ಷಸ್ಥಾನವನ್ನು ಸೂಚಿಸುತ್ತದೆ.]

**೧೩.** ಹೇ ಮೃತ್ಯು, ಆ ನೀನು[೧] ಸ್ವರ್ಗಪ್ರಾಪ್ತಿಗೆ ಸಾಧನವಾದ ಅಗ್ನಿಯನ್ನು ತಿಳಿದಿರುವೆ. ಶ್ರದ್ಧೆಯುಳ್ಳ[೨] ನನಗೆ ಅದನ್ನು ಉಪದೇಶಿಸು. ಸ್ವರ್ಗಲೋಕದಲ್ಲಿ ಇರುವವರು[೩] ಅಮೃತತ್ವವನ್ನು ಪಡೆಯುತ್ತಾರೆ. ಇದೇ ನಾನು ಬೇಡುವ ಎರಡನೆಯ ವರ.

[[೧] ಸರ್ವಜ್ಞನಾದ ನೀನು.
[೨] ಮೋಕ್ಷದಲ್ಲಿ ಶ್ರದ್ಧೆಯುಳ್ಳ.
[೩] ಪರಮಪದವನ್ನು ಹೊಂದಿದವರು. ಏಕೆಂದರೆ ಸ್ವರೂಪಾವಿರ್ಭಾವರೂಪವಾದ ಮೋಕ್ಷವೆಂಬ ಅಮೃತತ್ವವು, ಸ್ವರ್ಗವೆಂದು ಹೇಳಲ್ಪಟ್ಟ ವಿಶೇಷದೇಶದಲ್ಲಿ ಬ್ರಹ್ಮವನ್ನು ಹೊಂದಿದ ಮೇಲೆ ಉಂಟಾಗುತ್ತದೆ. 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂದು ಛಾಂದೋಗ್ಯಶ್ರುತಿಯು (೮, ೧೨) ಹೇಳುತ್ತದೆ.]

**೧೪.** ಹೇ ನಚಿಕೇತ, ನಿನಗೆ ಹೇಳುತ್ತೇನೆ: ಅದನ್ನು ನನ್ನಿಂದ ತಿಳಿದುಕೊ. ಸ್ವರ್ಗಕ್ಕೆ ಸಾಧನವಾದ ಅಗ್ನಿಯನ್ನು ತಿಳಿದವನಾಗಿ ಅನಂತ ಲೋಕದ[1] ಪ್ರಾಪ್ತಿಯನ್ನು, ಅನಂತರ ಅಪುನರಾವೃತ್ತಿಯನ್ನು (ಸಾಧಕನು ಹೊಂದುತ್ತಾನೆ). ಗುಹೆಯಲ್ಲಿ ಇಟ್ಟಿರುವ ಇದನ್ನು[2] ತಿಳಿದುಕೊ.

[[1] ಮುಂದೆ 'ತದ್ವಿಷ್ಣೋಃ ಪರಮಂ ಪದಂ' (೧, ೩, ೯) ಎಂದು ಹೇಳಿರುವ ವಿಷ್ಣುಲೋಕ.

[[2] ಈ ಜ್ಞಾನವು ಬ್ರಹ್ಮೋಪಾಸನೆಗೆ ಅಂಗವಾದುದರಿಂದ ಮೋಕ್ಷಕ್ಕೆ ಕಾರಣವಾಗಿರುವುದು ಇದರ ಲಕ್ಷಣ; ಹೃದಯಗುಹೆಯಲ್ಲಿರುವ ಮೋಕ್ಷಕ್ಕೆ ಕಾರಣವಾದ ಈ ಜ್ಞಾನದ ಸ್ವರೂಪವನ್ನು ಇತರರು ಅರಿಯರು; ನೀನು ತಿಳಿದುಕೊ.]

**೧೫.** ಅವನಿಗೆ ಲೋಕಕ್ಕೆ ಸಾಧನವಾದ ಅಗ್ನಿಯನ್ನು ಯಮನು ಉಪದೇಶಿಸಿದನು: ಎಂಥ ಮತ್ತು ಎಷ್ಟು ಇಟ್ಟಿಗೆಗಳು (ಬೇಕೆಂಬುದನ್ನೂ) ಮತ್ತು ಹೇಗೆ (ಚಯನಮಾಡಬೇಕೆಂಬುದನ್ನೂ ಹೇಳಿದನು). ನಚಿಕೇತನು ತನಗೆ ಹೇಳಿದಂತೆಯೇ ಪುನರುಚ್ಚಾರಮಾಡಿದನು. ಅನಂತರ ಮೃತ್ಯುವು ಸಂತುಷ್ಟನಾಗಿ ಮತ್ತೂ ಹೇಳಿದನು.

**೧೬.** ಆ ಮಹಾತ್ಮನು ಪ್ರೀತಿಯುಳ್ಳವನಾಗಿ ಅವನಿಗೆ ಹೇಳಿದನು: 'ಈಗ ಇಲ್ಲಿ ನಿನಗೆ ಮತ್ತೊಂದು ವರವನ್ನು ಕೊಡುತ್ತೇನೆ. ಈ ಅಗ್ನಿಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವುದು; ಮತ್ತು ವಿಚಿತ್ರವಾದ ಈ ರತ್ನ ಮಾಲೆಯನ್ನು[1] ತೆಗೆದುಕೊ.'

[[1] ಧ್ವನಿತವಾಗುತ್ತಿರುವ.]

**೧೭.** ನಚಿಕೇತನಿಗೆ ಸಂಬಂಧಪಟ್ಟ ಮೂರು ಅನುವಾಕಗಳನ್ನು[1] ಅಧ್ಯಯನಮಾಡಿ, ಮೂರು ಕರ್ಮಗಳನ್ನೂ[2] ಮಾಡುತ್ತ, ಮೂರರೊಂದಿಗೆ[3] ಸಂಧಿಯನ್ನು[4] ಹೊಂದಿ (ಅವನು) ಜನ್ಮಮೃತ್ಯುಗಳನ್ನು ದಾಟುತ್ತಾನೆ. ಚಿತ್ಸ್ವರೂಪನಾದ ಜೀವನನ್ನು[5] ಸ್ತುತ್ಯರ್ಹನಾದ ದೇವನೆಂದು[6] ತಿಳಿದು,[7] ಸಾಕ್ಷಾತ್ಕರಿಸಿ, ಈ ಶಾಂತಿಯನ್ನು ಅತ್ಯಂತವಾಗಿ ಹೊಂದುತ್ತಾನೆ.

[[1] 'ಅಯಂ ವಾವ ಯಃ ಪವತೇ' (ತೈ. ಬ್ರಾಹ್ಮಣ, ೩, ೧೧, ೭-೯) ಎಂಬ ಮಂತ್ರದಿಂದ ಆರಂಭವಾಗಿರುವ ಮೂರು ಅನುವಾಕಗಳು.

[2] ಯಜ್ಞ, ಅಧ್ಯಯನ, ದಾನ ಅಥವಾ ಪಾಕಯಜ್ಞ, ಹವಿರ್ಯಜ್ಞ, ಸೋಮ ಯಜ್ಞ—ಇವುಗಳನ್ನು ಮಾಡುವವನು.

[3] ಮೂರು ಸಲ ಚಯನಮಾಡಲ್ಪಟ್ಟ ಅಗ್ನಿಗಳೊಂದಿಗೆ.

[4] ಪರಮಾತ್ಮೋಪಾಸನೆಯೊಂದಿಗೆ.

[5] ಬ್ರಹ್ಮಜಜ್ಞನೆಂದರೆ ಜೀವನು; ಏಕೆಂದರೆ ಅವನು ಬ್ರಹ್ಮದಿಂದ ಹುಟ್ಟಿರುತ್ತಾನೆ ಮತ್ತು ಜ್ಞಾನಸ್ವರೂಪನಾಗಿರುತ್ತಾನೆ.

[6] ಪರಮಾತ್ಮನನ್ನೇ ಆತ್ಮನನ್ನಾಗಿ ಉಳ್ಳವನಿಗೆ ದೇವನೆಂದು ಹೆಸರು.

[7] ತನ್ನ ಆತ್ಮವನ್ನೇ ಬ್ರಹ್ಮಾತ್ಮಕವೆಂದು ತಿಳಿದು.]

**೧೮.** ನಚಿಕೇತನಿಗೆ ಸಂಬಂಧಪಟ್ಟ ಮೂರು ಅನುವಾಕಗಳನ್ನು ಅಧ್ಯಯನಮಾಡಿದ ಯಾವನು, ಈ ಮೂರನ್ನೂ[1] ತಿಳಿದುಕೊಂಡು, ಹೀಗೆ ಅರಿತವನಾಗಿ[2] ನಾಚಿಕೇತಾಗ್ನಿಯನ್ನು ಚಯನಮಾಡುತ್ತಾನೆಯೊ ಅವನು ಮೃತ್ಯುಪಾಶಗಳನ್ನು[3] (ಶರೀರಪಾತಕ್ಕೆ) ಮೊದಲೇ ಬಿಡಿಸಿಕೊಂಡು, ಶೋಕ ವನ್ನು ಮೀರಿ ಸ್ವರ್ಗಲೋಕದಲ್ಲಿ ಸಂತೋಷಪಡುತ್ತಾನೆ.

[[1] 'ಬ್ರಹ್ಮಜಜ್ಞಂ ದೇವಮೀಡ್ಯಂ' (೧, ೧, ೧೭) ಎಂಬ ಮಂತ್ರದಲ್ಲಿ ಹೇಳಲ್ಪಟ್ಟ ಬ್ರಹ್ಮಸ್ವರೂಪ, ಬ್ರಹ್ಮಾತ್ಮಕವಾದ ತನ್ನ ಸ್ವರೂಪ ಮತ್ತು 'ತ್ರಿಭಿರೇತ್ಯ ಸಂಧಿಂ' (೧, ೧, ೧೭) ಎಂಬಲ್ಲಿ ನಿರ್ದಿಷ್ಟವಾದ ಅಗ್ನಿಸ್ವರೂಪ.

[2] ಇಂತಹ ಅರ್ಥತ್ರಯದ ಅನುಸಂಧಾನಪೂರ್ವಕವಾಗಿ ನಾಚಿಕೇತಾಗ್ನಿಯನ್ನು ಚಯನಮಾಡಿದವನು.

[3] ರಾಗದ್ವೇಷಾದಿರೂಪವಾದ.]

**ಯೋ ವಾಪ್ಯೇತಾಂ ಬ್ರಹ್ಮಜಜ್ಞಾತ್ಮಭೂತಾಂ**
**ಚಿತಿಂ ವಿದಿತ್ವಾ ಚಿನುತೇ ನಾಚಿಕೇತಮ್ ।**
**ಸ ಏವ ಭೂತ್ವಾ ಬ್ರಹ್ಮಜಜ್ಞಾತ್ಮಭೂತಃ**
**ಕರೋತಿ ತದ್ಯೇನ ಪುನರ್ನ ಜಾಯತೇ ॥ ೧೯ ॥**

[ಈ ಮಂತ್ರವು ಇತರ ಪಾಠಗಳಲ್ಲಿ ಕಂಡುಬರುವುದಿಲ್ಲ.]

**೧೯.** ಯಾವನು[1] ಬ್ರಹ್ಮಜಜ್ಞಾತ್ಮಭೂತವಾದ ಈ ಚಯನವನ್ನು ತಿಳಿದುಕೊಂಡು ನಾಚಿಕೇತಾಗ್ನಿಯನ್ನು ಚಯನಮಾಡುತ್ತಾನೆಯೋ, ಅವನೇ ಬ್ರಹ್ಮಜಜ್ಞಾತ್ಮಭೂತನಾಗಿ,[2] ಯಾವುದರಿಂದ ಹುಟ್ಟುವುದಿಲ್ಲವೊ ಅದನ್ನು ಮಾಡುತ್ತಾನೆ.

[೧ ಈ ಚಯನವನ್ನೇ ತನ್ನ ಆತ್ಮವೆಂದು ಅರಿತುಕೊಂಡು ಬ್ರಹ್ಮವೇ ತನ್ನ ಆತ್ಮವೆಂದು ಅನುಸಂಧಾನಮಾಡಿ ನಾಚಿಕೇತಾಗ್ನಿಯನ್ನು ಯಾವನು ಚಯನಮಾಡುತ್ತಾನೆಯೊ.

೨ ಭಗವಂತನೇ ತನ್ನ ಆತ್ಮವೆಂದು ಸ್ವಾತ್ಮಾನುಸಂಧಾನಮಾಡಿ ಮೋಕ್ಷಕ್ಕೆ ಕಾರಣವಾದ ಭಗವದುಪಾಸನೆಯನ್ನು ಮಾಡುತ್ತಾನೆ.]

೨೦. ಹೇ ನಚಿಕೇತ, ನೀನು ಎರಡನೆಯ ವರದಿಂದ ಬೇಡಿಕೊಂಡ ಸ್ವರ್ಗಸಾಧನವಾದ೧ ಅಗ್ನಿಯು ಇದೇ. ಈ ಅಗ್ನಿಯನ್ನು ನಿನ್ನ ಹೆಸರಿನಿಂದಲೇ ಜನರು ಕರೆಯುವರು. ಹೇ ನಚಿಕೇತ, ಮೂರನೆಯ ವರವನ್ನು ಕೇಳಿಕೊ.

[೧ ಮೋಕ್ಷಸಾಧನವಾದ.]

೨೧. (ನಚಿಕೇತ): ಮನುಷ್ಯನು ಸತ್ತಮೇಲೆ ಈ ಸಂಶಯವುಂಟು: 'ಅವನು ಇದ್ದಾನೆ' ಎಂದು ಕೆಲವರು ಹೇಳುತ್ತಾರೆ, 'ಅವನು ಇಲ್ಲ' ಎಂದು ಕೆಲವರು ಹೇಳುತ್ತಾರೆ. ನಿನ್ನಿಂದ ಉಪದಿಷ್ಟನಾಗಿ ಇದನ್ನು ತಿಳಿಯಲು ನಾನು ಇಚ್ಛಿಸುತ್ತೇನೆ. ವರಗಳಲ್ಲಿ ಇದು ಮೂರನೆಯ ವರ.

[ಆತ್ಮಶರೀರಗಳ ವಿಯೋಗದ ಪ್ರಶ್ನೆಗೆ ಈ ಮಂತ್ರವು ಸಂಬಂಧಿಸಿಲ್ಲ. ಸರ್ವಬಂಧನಗಳಿಂದ ಮೋಕ್ಷವನ್ನು ಹೊಂದುವುದು ಇದರ ಅಭಿಪ್ರಾಯ. ಮೋಕ್ಷಕ್ಕೆ ಅಧಿಕಾರಿಯಾದ ಮನುಷ್ಯನು ಸತ್ತು, ಸರ್ವಬಂಧನಗಳಿಂದ ಮುಕ್ತನಾದ ಮೇಲೆ ಅವನು ಇದ್ದಾನೆಯೊ ಇಲ್ಲವೊ ಎಂಬ ಪ್ರಶ್ನೆ ಬರುತ್ತದೆ. ಮೋಕ್ಷದ ವಿಚಾರವಾಗಿ ಇರುವ ವಾದಿಗಳ ವಿಭಿನ್ನಮತಗಳೇ ಈ ಸಂದೇಹಕ್ಕೆ ಕಾರಣ. ಆದುದರಿಂದ ಈ ಸಂದೇಹವನ್ನು ಕಳೆದುಕೊಳ್ಳಲು ನಚಿಕೇತನು ಯಮನನ್ನು ಮೋಕ್ಷದ ಯಥಾರ್ಥಸ್ವರೂಪದ ವಿಚಾರವಾಗಿ ಪ್ರಶ್ನಿಸುತ್ತಾನೆ. 'ತ್ರಯಾಣಾಮೇವ ಚೈವ' (೧, ೪, ೬) ಎಂಬ ಸೂತ್ರವನ್ನು ವಿವರಿಸುತ್ತ ಶ್ರೀರಾಮಾನುಜಾಚಾರ್ಯರು ಹೀಗೆ ಹೇಳಿರುತ್ತಾರೆ: 'ಅವನ ಮೂರನೆಯ ವರವಾಗಿ ಮೋಕ್ಷಕ್ಕೆ ಸಂಬಂಧಪಟ್ಟ ಪ್ರಶ್ನೆಯ ಮೂಲಕ ಮೂರು ವಿಷಯಗಳನ್ನು ಕೇಳಿರುತ್ತಾನೆ: ಉಪೇಯಸ್ವರೂಪ (ಮುಕ್ತಿ), ಉಪೇತೃಸ್ವರೂಪ (ಮೋಕ್ಷಾರ್ಥಿಯ ಸ್ವರೂಪ), ಉಪಾಯಸ್ವರೂಪ (ಕರ್ಮಾನುಗೃಹೀತವಾದ ಉಪಾಸನೆ).' '"ಯೇಽಯಂ" ಎಂಬ ಪ್ರಶ್ನವಾಕ್ಯದಲ್ಲಿ ಮೋಕ್ಷಸ್ವರೂಪವಾದ ಪ್ರಶ್ನೆಯು ಕಂಠೋಕ್ತವಾಗಿ ಹೇಳಿದೆ' ಎಂದು ಸುದರ್ಶನಸೂರಿಗಳು ತಮ್ಮ ಶ್ರುತಪ್ರಕಾಶಿಕೆಯಲ್ಲಿ ಹೇಳಿರುತ್ತಾರೆ.]

೨೨. (ಯಮ): ಈ ವಿಷಯದಲ್ಲಿ ಹಿಂದೆ ದೇವತೆಗಳೂ ಕೂಡ ಸಂಶಯಪಟ್ಟಿದ್ದರು. ಇದನ್ನು೧ ಸುಲಭವಾಗಿ ತಿಳಿದುಕೊಳ್ಳಲು ಆಗುವುದಿಲ್ಲ.

ಏಕೆಂದರೆ ಈ ಧರ್ಮವು ಸೂಕ್ಷ್ಮವಾದದ್ದು.[೨] ಹೇ ನಚಿಕೇತ, ಬೇರೊಂದು ವರವನ್ನು ಬೇಡಿಕೊ. ನನ್ನನ್ನು ಒತ್ತಾಯಪಡಿಸಬೇಡ, ಖಂಡಿತವಾಗಿ ಒತ್ತಾಯಪಡಿಸಬೇಡ. ನನ್ನನ್ನು ಬಿಡು.

[ಮುಕ್ತನ ಸ್ವರೂಪದ ವಿಚಾರವಾಗಿ ಪ್ರಶ್ನೆಮಾಡಲ್ಪಟ್ಟ ಯಮನು, ಉಪದೇಶ ಮಾಡುವ ವಿಷಯವು ಅತಿಗಹನವಾದುದರಿಂದ, ಮುಮುಕ್ಷುವು ಗುರಿಯನ್ನು ಮುಟ್ಟದೆ ಮಧ್ಯದಲ್ಲೇ ಬೀಳುವ ಸಂಭವವಿರುವುದರಿಂದ ಇದನ್ನು ಉಪದೇಶಿಸಕೂಡ ದೆಂದು ಯೋಚಿಸಿ ಹೀಗೆ ಹೇಳುತ್ತಾನೆ.

[೧] ಮುಕ್ತನಾದವನ ಆತ್ಮಸ್ವರೂಪದ ವಿಚಾರವಾಗಿ.

[೨] ಸಾಮಾನ್ಯಧರ್ಮವೂ ಕೂಡ ತಿಳಿಯಲು ಕಷ್ಟವಾಗಿರುತ್ತದೆ.]

೨೨. (ನಚಿಕೇತ): ಇಲ್ಲಿ ದೇವತೆಗಳೂ ಕೂಡ ಸಂಶಯಪಟ್ಟಿದ್ದ ರಲ್ಲವೆ? ಹೇ ಯಮನೆ, ಇದು ಸುಲಭವಾಗಿ ತಿಳಿಯತಕ್ಕದ್ದಲ್ಲವೆಂದು ನೀನೂ[೧] ಹೇಳುತ್ತಿರುವೆ. ಇದನ್ನು ಹೇಳುವ ನಿನ್ನಂತಹ ಮತ್ತೊಬ್ಬನು ಸಿಕ್ಕುವುದಿಲ್ಲ. ಇದಕ್ಕೆ ಸಮಾನವಾದ ಬೇರೆ ಯಾವ ವರವೂ ಇಲ್ಲ.

[[೧] ಆತ್ಮಸ್ವರೂಪವು ಸುಜ್ಞೇಯವಲ್ಲವೆಂದು ಹೇಳುತ್ತಿರುವ ನೀನೂ.]

೨೩. (ಯಮ): ಶತಾಯುಗಳಾದ ಪುತ್ರಪೌತ್ರರನ್ನು ಬೇಡಿಕೊ; ಬಹುಪಶುಗಳನ್ನೂ, ಆನೆಕುದುರೆಗಳನ್ನೂ, ಚಿನ್ನವನ್ನೂ, ಭೂಮಿಯ ವಿಸ್ತೀರ್ಣವಾದ ರಾಜ್ಯವನ್ನೂ ಬೇಡಿಕೊ. ನೀನು ಎಷ್ಟು ವರ್ಷಗಳು ಬದುಕಲಿಚ್ಛಿಸುವೆಯೊ (ಅಷ್ಟು ವರ್ಷಗಳು) ಬದುಕು.

[ವಿಷಯವು ದುರ್ವಿಜ್ಞೇಯವಾದರೂ ನಚಿಕೇತನು ಮಧ್ಯೆ ಬೀಳುವುದಿಲ್ಲವೆಂದು ನಿಶ್ಚಯಿಸಿ, ಅವನಿಗೆ ವಿಷಯವನ್ನು ತಿಳಿದುಕೊಳ್ಳಲು ಶಕ್ತಿಯಿದ್ದರೂ ವಿಷಯಾ ಸಕ್ತನಾದವನಿಗೆ ಇಂತಹ ಮುಕ್ತಾತ್ಮತತ್ತ್ವವನ್ನು ಉಪದೇಶಮಾಡಕೂಡದೆಂದು ಯೋಚಿಸಿ ನಚಿಕೇತನಿಗೆ ಮೋಕ್ಷದ ವಿಚಾರದಲ್ಲಿ ಸ್ಥಿರಬುದ್ಧಿಯುಂಟಾಗುವುದಕ್ಕಾಗಿ ಯಮನು ಹೀಗೆ ಹೇಳಿದನು.]

೨೫. ಇದಕ್ಕೆ ಸಮಾನವಾದ ವರವು (ಬೇರೆ ಇದೆಯೆಂದು) ನೀನು ಎಣಿಸುವೆಯಾದರೆ ಧನವನ್ನೂ ದೀರ್ಘಾಯುಸ್ಸನ್ನೂ ಬೇಡಿಕೊ. ಹೇ ನಚಿ ಕೇತ, ಮಹಾಭೂಮಿಯಲ್ಲಿ ನೀನು (ರಾಜ)ನಾಗಿರು. (ಎಲ್ಲ) ಕಾಮನೆ ಗಳಲ್ಲಿಯೂ ನಿನ್ನನ್ನು ಕಾಮನಾವಿಷಯವನ್ನಾಗಿ[೧] ಮಾಡುತ್ತೇನೆ.

[[1] ಸ್ವತಃ ಕಾಮ್ಯಮಾನರಾದ ಅಪ್ಸರಾದಿಗಳೂ ಕೂಡ ನಿನ್ನನ್ನು ಇಚ್ಛಿಸುವಂತೆ ಮಾಡುತ್ತೇನೆ.]

**೨೬.** ಮರ್ತ್ಯಲೋಕದಲ್ಲಿ ಯಾವ ಯಾವ ಕಾಮುಗಳು ದುರ್ಲಭವೊ ಆ ಕಾಮುಗಳೆಲ್ಲವನ್ನೂ ಇಚ್ಛಾನುಸಾರ ಬೇಡಿಕೊ. ಈ ಅಪ್ಸರಸ್ತ್ರೀಯರು ರಥಗಳಿಂದಲೂ ವಾದ್ಯಗಳಿಂದಲೂ ಕೂಡಿರುತ್ತಾರೆ. ಇಂತಹವರು ಮನುಷ್ಯರಿಗೆ ಲಭ್ಯರಲ್ಲ. ನಾನು ಕೊಡುವ ಇವರಿಂದ ಸೇವೆಮಾಡಿಸಿಕೊ. ಹೇ ನಚಿಕೇತ, ಮರಣವನ್ನು[1] ಕುರಿತು ಪ್ರಶ್ನಿಸಬೇಡ.

[[1] ಮರಣವಾದ ಮೇಲೆ ಎಂದರೆ ಮುಕ್ತನ ಆತ್ಮಸ್ವರೂಪದ ವಿಚಾರವಾಗಿ.]

**೨೭.** (ನಚಿಕೇತ): ಹೇ ಅಂತಕ, ಮನುಷ್ಯನ (ಈ ಭೋಗಗಳು) ಕ್ಷಣಿಕವಾದುವುಗಳು. ಇವು ಎಲ್ಲ ಇಂದ್ರಿಯಗಳ ತೇಜಸ್ಸನ್ನು ಕ್ಷೀಣಗೊಳಿಸುವುವು. ಎಲ್ಲ ಆಯುಸ್ಸೂ ಅಲ್ಪವೇ.[1] ಈ ವಾಹನಗಳೂ ನೃತ್ಯಗೀತೆಗಳೂ ನಿನಗೇ ಇರಲಿ.

[[1] ಬ್ರಹ್ಮನ ಆಯುಸ್ಸು ಕೂಡ ಅಲ್ಪ, ನಮ್ಮ ವಿಚಾರ ಹೇಳಬೇಕಾದದ್ದು ಏನಿದೆ? ಚಿರಜೀವಿಕೆಯನ್ನೂ ಕೂಡ ಬಯಸಕೂಡದು ಎಂದರ್ಥ.]

**೨೮.** ಮನುಷ್ಯನು ಧನದಿಂದ ತೃಪ್ತಿಯನ್ನು ಹೊಂದುವುದಿಲ್ಲ.[1] ನಿನ್ನನ್ನು ನೋಡಿದೆವಾದರೆ ಧನವನ್ನು ಹೊಂದುತ್ತೇವೆ. ನೀನು (ಯಾಮ್ಯ ಪದವಿಯಲ್ಲಿ) ಆಳುವ ವರೆಗೂ ಬದುಕುತ್ತೇವೆ.[2] ಆದರೆ ನನಗೆ ಆ ವರವೇ ಬೇಕು.

[[1] 'ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ' ಎಂದು ಹೇಳಿರುವ ಹಾಗೆ ದ್ರವ್ಯಸಂಚಯದಿಂದ ತೃಪ್ತಿ ಉಂಟಾಗಿದ್ದು ಕಂಡುಬರುವುದಿಲ್ಲ.
[2] ವರವು ಬರಲಿ, ಬರದಿರಲಿ, ಜೀವಿತಾವಧಿಯು ನಿಶ್ಚಿತವಾದುದು ಎಂದರ್ಥ.]

**೨೯.** ಮುಪ್ಪಿಲ್ಲದ ಅಮರರ (ಸ್ವರೂಪವನ್ನು)[1] ತಿಳಿದುಕೊಂಡು, ವಿವೇಕಿಯಾಗಿ ಮುಪ್ಪುಳ್ಳ ಯಾವ ಮರ್ತ್ಯನು ವಿಷಯವಸ್ತುಗಳನ್ನು[2] ಇಚ್ಛಿಸುತ್ತಾನೆ? ವರ್ಣರತಿಪ್ರಮೋದಗಳನ್ನು[3] ತಿಳಿದುಕೊಂಡ ಯಾವನು ಅತ್ಯಲ್ಪವಾದ (ಅನತಿದೀರ್ಘೇ) ಐಹಿಕಜೀವಿತದಲ್ಲಿ ರಮಿಸುತ್ತಾನೆ?

[[1] ಜರಾಮರಣಶೂನ್ಯರಾದ ಮುಕ್ತರ ಸ್ವರೂಪವನ್ನು.

[2] ಜರಾಮರಣಾದಿಕ್ಲೇಶಗಳಿಂದ ಕೂಡಿದ ಅಪ್ಸರಾದಿಗಳನ್ನು.
[3] ಆದಿತ್ಯವರ್ಣವೇ ಮೊದಲಾದ ಭಗವಂತನ ರೂಪವಿಶೇಷಗಳನ್ನು ಮತ್ತು ಬ್ರಹ್ಮಾನಂದದಿಂದ ಜನಿತವಾದ ಆನಂದವಿಶೇಷಗಳನ್ನು.]

**೩೦.** ಹೇ ಮೃತ್ಯು, ಯಾವ ಪಾರಲೌಕಿಕವಾದ ಮಹದ್ವಿಷಯದಲ್ಲಿ[1] ಈ ಸಂಶಯವನ್ನು ಹೊಂದುತ್ತಾರೆಯೊ, ಅದನ್ನೇ ನಮಗೆ ಹೇಳು. ಯಾವ ಈ ವರವು ಗೂಢವಾದ (ಆತ್ಮತತ್ತ್ವವನ್ನು) ಪ್ರವೇಶಿಸಿರುವುದೊ[2] ಅದಕ್ಕಿಂತ ಬೇರೆ ವರವನ್ನು ನಚಿಕೇತನು ಕೇಳಲಿಲ್ಲ.

[[1] ಮುಕ್ತಾತ್ಮಸ್ವರೂಪದ ವಿಷಯದಲ್ಲಿ.
[2] ಆತ್ಮತತ್ತ್ವಕ್ಕೆ ಸಂಬಂಧಪಟ್ಟಿರುವುದೊ.]

## ಎರಡನೆಯ ವಲ್ಲೀ

೧. (ಯಮ): ಶ್ರೇಯಸ್ಸು[೧] ಬೇರೆ, ಪ್ರೇಯಸ್ಸು[೨] ಬೇರೆಯೇ; ಇವೆರಡು ಪರಸ್ಪರ ವಿಲಕ್ಷಣಪ್ರಯೋಜನವುಳ್ಳವುಗಳಾಗಿ ಮನುಷ್ಯನನ್ನು ಬಂಧಿಸುವುವು. ಅವೆರಡರಲ್ಲಿ ಶ್ರೇಯಸ್ಸನ್ನು ತೆಗೆದುಕೊಳ್ಳುವವನಿಗೆ[೩] ಒಳ್ಳೆಯದಾಗುವುದು; ಯಾವನು ಪ್ರೇಯಸ್ಸನ್ನು ಆರಿಸಿಕೊಳ್ಳುವನೊ ಅವನು ಪುರುಷಾರ್ಥದಿಂದ ಚ್ಯುತನಾಗುವನು.

[ಹೀಗೆ ನಚಿಕೇತನನ್ನು ಪರೀಕ್ಷಿಸಿ ಅವನ ಮುಮುಕ್ಷಾಸ್ಥೈರ್ಯವನ್ನು ನಿಶ್ಚಯಿಸಿಕೊಂಡು, ಅವನು ಉಪದೇಶಕ್ಕೆ ಯೋಗ್ಯನೆಂದು ಅರಿತು ಯಮನು ಮುಮುಕ್ಷತೆಯನ್ನು ಹೊಗಳುತ್ತಾನೆ.

[೧] ಅತಿಪ್ರಶಸ್ತವಾದ ಮೋಕ್ಷಮಾರ್ಗ.

[೨] ಪ್ರಿಯವಾದ ಭೋಗಮಾರ್ಗ.

[೩] ಮೋಕ್ಷಕ್ಕಾಗಿ ಪ್ರಯತ್ನಮಾಡುವವನಿಗೆ.]

೨. ಶ್ರೇಯಸ್ಸು ಮತ್ತು ಪ್ರೇಯಸ್ಸು ಮನುಷ್ಯನ ಸಮೀಪಕ್ಕೆ ಬರುತ್ತವೆ. ಪ್ರಜ್ಞಾಶಾಲಿಯು ಅವುಗಳನ್ನು ಚೆನ್ನಾಗಿ ಪರಿಶೀಲಿಸಿ ವಿವೇಚಿಸುತ್ತಾನೆ. ಪ್ರಜ್ಞಾಶಾಲಿಯು ಪ್ರೇಯಸ್ಸಿಗಿಂತ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಮಂದಮತಿಯು ಯೋಗಕ್ಷೇಮಕ್ಕಾಗಿ[೧] ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

[[೧] ಶರೀರೋಪಚಯಕ್ಕೆ ಯೋಗವೆಂದೂ ಅದರ ಪಾಲನೆಗೆ ಕ್ಷೇಮವೆಂದೂ ಹೆಸರು.]

೩. ಹೇ ನಚಿಕೇತ, ಆ ನೀನು ಪ್ರಿಯವೂ ಪ್ರಿಯರೂಪವೂ ಆದ ಕಾಮಗಳನ್ನು ವಿವೇಚಿಸಿ ಬಿಟ್ಟಿರುತ್ತೀಯೆ. ಬಹುಜನರು ಮುಳುಗಿಹೋಗುವ ವಿತ್ತಮಯವಾದ ಈ ಕುತ್ಸಿತಗತಿಯನ್ನು ನೀನು ಹೊಂದಲಿಲ್ಲ.

೪. ಯಾವುದು ವಿದ್ಯೆಯೆಂದೂ[೧] ಅವಿದ್ಯೆಯೆಂದೂ[೨] ತಿಳಿಯಲ್ಪಟ್ಟಿದೆಯೊ ಇವೆರಡೂ ದೂರವಾಗಿ ಭಿನ್ನವಾಗಿರುವುವು. ಇವೆರಡು ಅತ್ಯಂತ ಭಿನ್ನಗತಿಗಳುಳ್ಳವಾಗಿಯೂ ಪರಸ್ಪರ ವಿರುದ್ಧವಾಗಿಯೂ ಇವೆ. ನಚಿಕೇತನನ್ನು ವಿದ್ಯಾರ್ಥಿಯೆಂದು ಎಣಿಸುತ್ತೇನೆ. ನಿನ್ನನ್ನು ಬಹು ಕಾಮಗಳು ಸೆಳೆಯಲಿಲ್ಲ.[೩]

[[೧] ವೈರಾಗ್ಯತತ್ತ್ವಜ್ಞಾನಮಯವಾದದ್ದು.

[2] ಕಾಮುಕವರ್ಮರೂಪವುಳ್ಳದ್ದು.
[3] ಶ್ರೇಯೋಮಾರ್ಗದಿಂದ ನಿನ್ನನ್ನು ತಪ್ಪಿಸಲಿಲ್ಲ ಎಂದರೆ ವಿಷಯವಶನಾಗಲಿಲ್ಲ.]

೫. (ಕಾಮುಕವರ್ಮಾದಿಲಕ್ಷಣವುಳ್ಳ) ಅವಿದ್ಯೆಯ ಮಧ್ಯದಲ್ಲಿ[1] ಇರುವವರಾಗಿ ತಾವೇ ಪ್ರಜ್ಞಾಶಾಲಿಗಳು ಶಾಸ್ತ್ರಕುಶಲರು ಎಂದು ತಿಳಿದುಕೊಂಡು ಜರಾರೋಗಾದಿದುಃಖಗಳಿಂದ ಪೀಡಿತರಾಗಿ ಅವಿವೇಕಿಗಳು, ಕುರುಡರು ಕರೆದುಕೊಂಡು ಹೋಗುತ್ತಿರುವ ಕುರುಡರಂತೆ, ಸುತ್ತುತ್ತಿರುವರು.

[ಅವಿದ್ಯಾಮಾರ್ಗವನ್ನು ಯಮನು ಇಲ್ಲಿ ನಿಂದಿಸುತ್ತಾನೆ.
[1] ಘನೀಭೂತವಾದಂತಿರುವ ತಮಸ್ಸಿನಲ್ಲಿ ಇರುವವರಾಗಿ.]

೬. ಗಮನವಿಲ್ಲದ ಮನಸ್ಸುಳ್ಳ, ವಿತ್ತಮೋಹದಿಂದ ಮೂಢನಾದ[1] ಅವಿವೇಕಿಗೆ ಸಾಂಪರಾಯವು[2] ಕಾಣುವುದಿಲ್ಲ. 'ಈ ಲೋಕವು ಮಾತ್ರ ಇದೆ, ಬೇರೆ ಲೋಕವಿಲ್ಲ' ಎಂದು ತಿಳಿದುಕೊಳ್ಳುವವನು[3] ಪುನಃ ಪುನಃ ನನ್ನ ವಶಕ್ಕೆ ಬರುತ್ತಾನೆ.

[[1] ವಿಷಯಾಶೆಗಳಿಂದ ವಶವಾದ ಮನಸ್ಸುಳ್ಳವನಿಗೆ.
[2] ಪರಲೋಕಸಾಧನೆಗೆ ಮಾಡುವ ಪ್ರಯತ್ನ.
[3] ದುರ್ಮಾನಿ.]

೭. ಈ (ಆತ್ಮನು) ಬಹುಜನರ ಶ್ರವಣಕ್ಕೂ ಲಭ್ಯನಲ್ಲ;[1] ಶ್ರವಣ ಮಾಡಿದ ಮೇಲೂ ಈತನನ್ನು ಬಹುಜನರು ಅರಿಯರು.[2] ಇವನನ್ನು ಹೇಳುವವನು ಆಶ್ಚರ್ಯನು, ಪಡೆಯುವವನು ಕುಶಲನು, ಕುಶಲನಿಂದ ಅನುಶಿಷ್ಟನಾಗಿ ತಿಳಿದುಕೊಳ್ಳುವವನು ಆಶ್ಚರ್ಯನು.[3]

[[1] ಶ್ರವಣವೂ ಕೂಡ ಮಹಾಸುಕೃತದ ಫಲ.
[2] ಶ್ರವಣಮಾಡಿದವರೆಲ್ಲರಿಗೂ ಪರಮಾತ್ಮಜ್ಞಾನವು ಕಷ್ಟವೆಂದು ಭಾವ.
[3] ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥
ಎಂದು ಗೀತೆಯು (೭, ೩) ಹೇಳಿದೆ.]

೮. ಪ್ರಾಕೃತನಾದ[1] ಮನುಷ್ಯನಿಂದ[2] ಉಪದೇಶಿಸಲ್ಪಟ್ಟರೆ ಈ ಆತ್ಮನನ್ನು ಚೆನ್ನಾಗಿ ಅರಿತುಕೊಳ್ಳಲು ಆಗುವುದಿಲ್ಲ; (ಏಕೆಂದರೆ ವಾದಿಗಳು) ಬಹುವಿಧವಾಗಿ (ಇವನನ್ನು) ಚಿಂತಿಸುತ್ತಾರೆ. ಅನ್ಯನಿಂದ[3] ಉಪದೇಶಿಸಲ್ಪಡ

ದಿದ್ದರೆ ಇಲ್ಲಿ ಗತಿಯಿಲ್ಲ;[೪] (ಆತ್ಮನು) ಅಣುಪ್ರಮಾಣಕ್ಕಿಂತ ಸೂಕ್ಷ್ಮನಾಗಿರುವನು ಮತ್ತು ಅತರ್ಕ್ಯನು.[೫]

[[೧] ಅಶ್ರೇಷ್ಠನು, ವೇದಾಂತಶ್ರವಣದಿಂದ ಪಾಂಡಿತ್ಯ ಮಾತ್ರ ಪ್ರಯೋಜನವಾಗಿ ಉಳ್ಳವನು.

[೨] ದೇಹವನ್ನೇ ಆತ್ಮವೆಂದು ತಿಳಿದಿರುವವನಿಂದ.

[೩] ಉಪದೇಶಿಸಲ್ಪಟ್ಟ ಆತ್ಮನಿಂದ ಭಿನ್ನನಾಗದವನು ಎಂದರೆ ಬ್ರಹ್ಮಾತ್ಮಸಾಕ್ಷಾತ್ಕಾರಿಯಿಂದ.

[೪] ಯಾವ ಜ್ಞಾನ ಉಂಟಾಗಬೇಕೊ ಆ ಜ್ಞಾನವು ಉಂಟಾಗುವುದಿಲ್ಲ.

[೫] ಯಾವನು ಉಪದೇಶಮಾಡಿದರೂ ಊಹಾಪೋಹಶಕ್ತಿ ಇರುವವರಿಗೆ ಆತ್ಮನನ್ನು ತಿಳಿದುಕೊಳ್ಳಲು ಸಾಧ್ಯವೆಂದು ಹೇಳಲಾಗುವುದಿಲ್ಲ; ಏಕೆಂದರೆ ಆತ್ಮನು ಅತ್ಯಂತ ಸೂಕ್ಷ್ಮನು ಮತ್ತು ತರ್ಕಕ್ಕೆ ಗೋಚರನಲ್ಲ.]

**೯.** ಈ (ಆತ್ಮವಿಷಯವಾದ) ಜ್ಞಾನವು ತರ್ಕದಿಂದ[೧] ಪಡೆಯತಕ್ಕದ್ದಲ್ಲ; ಮತ್ತೊಬ್ಬನಿಂದಲೇ[೨] ಉಪದೇಶಿಸಲ್ಪಟ್ಟರೆ ಅದನ್ನು ಚೆನ್ನಾಗಿ ತಿಳಿಯಬಹುದು. ಇದನ್ನು ನೀನು ಹೊಂದಿರುತ್ತೀಯೆ. ಹೇ ನಚಿಕೇತ, ನೀನು ಸತ್ಯವಾದ ಧೃತಿಯುಳ್ಳವನು. ನಿನ್ನಂತಹ ಕೇಳತಕ್ಕವನು ನಮಗೆ ಉಂಟಾಗಲಿ.

[[೧] ತರ್ಕಕುಶಲನಾದರೂ ಸ್ವತಂತ್ರವಾಗಿ ತಿಳಿದುಕೊಳ್ಳಲು ಆಗುವುದಿಲ್ಲ.

[೨] ಗುರುವಿನಿಂದ ಉಪದೇಶಿಸಲ್ಪಟ್ಟರೆ ಮೋಕ್ಷಕ್ಕೆ ಸಾಧನವಾದ ಜ್ಞಾನ ಉಂಟಾಗುತ್ತದೆ.]

**೧೦.** ನಿಧಿಯು[೧] ಅನಿತ್ಯವೆಂದು ನಾನು ತಿಳಿದಿರುತ್ತೇನೆ. ಅನಿತ್ಯಗಳಿಂದ[೨] ಆ ನಿತ್ಯವನ್ನು[೩] ಪಡೆಯಲು ಆಗುವುದಿಲ್ಲ. ನಾನು ಅನಿತ್ಯವಾದ ದ್ರವ್ಯಗಳಿಂದ ನಾಚಿಕೇತಾಗ್ನಿಯನ್ನು ಚಯನಮಾಡಿದೆನು.[೪] ಆದುದರಿಂದ ನಾನು ನಿತ್ಯವನ್ನು[೫] ಹೊಂದಿರುತ್ತೇನೆ.

[[೧] ಕರ್ಮಫಲರೂಪವಾದ ಕುಬೇರಾದಿಗಳ ಐಶ್ವರ್ಯ.

[೨] ಅನಿತ್ಯಫಲಗಳಿಗೆ ಸಾಧನವಾದ ಕರ್ಮಗಳಿಂದ ಅಥವಾ ಅನಿತ್ಯದ್ರವ್ಯಗಳ ಮೂಲಕ ಮಾಡಲ್ಪಟ್ಟ ಕರ್ಮಗಳಿಂದ.

[೩] ಆತ್ಮತತ್ತ್ವವನ್ನು.

[೪] ಬ್ರಹ್ಮಪ್ರಾಪ್ತಿಗೆ ಸಾಧನವಾದ ಜ್ಞಾನವನ್ನು ಹೊಂದಬೇಕೆಂಬ ಉದ್ದೇಶದಿಂದ.

[೫] ನಿತ್ಯಫಲಕ್ಕೆ ಸಾಧನವಾದ ಜ್ಞಾನವನ್ನು. ಆದುದರಿಂದ ಜ್ಞಾನದಿಂದಲೇ ಬ್ರಹ್ಮಪ್ರಾಪ್ತಿಯುಂಟಾಗುವುದು ಎಂಬುದರಲ್ಲಿ ಯಾವ ವಿರೋಧವೂ ಇಲ್ಲ.]

೧೧. ಕರ್ಮಫಲವಾದ ಜಗತ್ತಿನಲ್ಲಿರುವ[೧] ಕಾಮದ ಪ್ರಾಪ್ತಿಯನ್ನೂ, (ಮೋಕ್ಷಕ್ಕೆ ಸಂಬಂಧಪಟ್ಟ) ಆನಂತ್ಯ[೨] ಅಭಯದ ದಡ[೩] ಮಹಾಗುಣಗಳು[೪] ಕೀರ್ತಿ ಮತ್ತು ಸ್ಥೈರ್ಯ-ಇವುಗಳನ್ನೂ ತಿಳಿದುಕೊಂಡು ಧೀರನಾಗಿ ಧೈರ್ಯದಿಂದ (ಎಲ್ಲ ಕಾಮಗಳನ್ನೂ) ಬಿಟ್ಟಿರುತ್ತೀಯೆ.

[[೧] ಸರ್ವಲೋಕಗಳಲ್ಲಿರುವ ವಿಷಯರೂಪವಾದ ಕಾಮದ ಪ್ರಾಪ್ತಿಯನ್ನೂ.

[೨] ಅವಿನಾಶಿತ್ವ.

[೩] ಅತ್ಯಂತ ನಿರ್ಭಯತ್ವ.

[೪] ಅಪಹತಪಾಪ್ಮತ್ವ ಸತ್ಯಸಂಕಲ್ಪತ್ವ ಇವೇ ಮೊದಲಾದ ಗುಣಗಣಗಳು.]

೧೨. ದುರ್ದರ್ಶನೂ,[೧] ಗೂಢನೂ,[೨] (ಸರ್ವಭೂತಗಳನ್ನು) ಪ್ರವೇಶಿಸಿ (ಅವುಗಳ) ಹೃದಯಗುಹೆಯಲ್ಲಿರುವವನೂ, ಗಹ್ವರದಲ್ಲಿರುವವನೂ,[೩] ಪುರಾಣನೂ[೪] ಆದ ದೇವನನ್ನು[೫] ಅಧ್ಯಾತ್ಮಯೋಗಪ್ರಾಪ್ತಿಯಿಂದ[೬] ತಿಳಿದುಕೊಂಡು ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ.

[ಮೂರನೆಯ ಪ್ರಶ್ನೆಗೆ ಈ ಎರಡು ಮಂತ್ರಗಳ ಮೂಲಕ ಯಮನು ಉತ್ತರವನ್ನು ಕೊಡುತ್ತಾನೆ.

[೧] 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' (೧, ೨, ೭) ಎಂದು ಹಿಂದೆ ಹೇಳಿರುವಂತೆ ಪರಮಾತ್ಮನನ್ನು ನೋಡುವುದು ಕಷ್ಟ.

[೨] ತಿರೋಧಾನಶಕ್ತಿಯುಳ್ಳ ಕರ್ಮರೂಪವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟಿರುವವನು.

[೩] ಅಂತರ್ಯಾಮಿಯೂ.

[೪] ಅನಾದಿಯೂ.

[೫] ಪರಮಾತ್ಮನನ್ನು.

[೬] ಮನಸ್ಸನ್ನು ವಿಷಯದಿಂದ ಸೆಳೆದು ತನ್ನ ಆತ್ಮನ ಮೇಲೆ ಧ್ಯಾನಮಾಡುವುದಕ್ಕೆ ಅಧ್ಯಾತ್ಮಯೋಗವೆಂದು ಹೆಸರು; ಎಂದರೆ ಜೀವಾತ್ಮಜ್ಞಾನದ ಮೂಲಕ ಪರಮಾತ್ಮಜ್ಞಾನವನ್ನು ಹೊಂದಬೇಕು.]

೧೩. ಆ ಮನುಷ್ಯನು ಈ ಆತ್ಮತತ್ತ್ವವನ್ನು ಕೇಳಿ, ಚೆನ್ನಾಗಿ ಗ್ರಹಿಸಿ, ಕರ್ಮಫಲವಾದ ಶರೀರಾದಿಗಳನ್ನು ಬೇರ್ಪಡಿಸಿ,[೧] ಸೂಕ್ಷ್ಮನಾದ (ಪರಮಾ)ತ್ಮನನ್ನು ಹೊಂದಿ, ಮೋದನೀಯವಾದುದನ್ನು[೨] ಪಡೆದು ಸಂತೋಷಪಡುತ್ತಾನೆ. ನಚಿಕೇತನಿಗೆ ಮನೆಯು[೩] ತೆರೆದಿದೆಯೆಂದು ಎಣಿಸುತ್ತೇನೆ.

[[೧] ತ್ಯಾಗಮಾಡಿ.

[2] ಅಪಹತಪಾಪ್ಮತ್ವವೇ ಮೊದಲಾದ ಅಷ್ಟಗುಣಗಳಿಂದ ಕೂಡಿದ ಸ್ವಸ್ವರೂಪವನ್ನು.
[3] ಬ್ರಹ್ಮರೂಪವಾದ ಸ್ಥಾನವು ನಚಿಕೇತನಿಗೆ ತೆರೆದಿದೆ. ನಚಿಕೇತನು ಒಳಗೆ ಪ್ರವೇಶಿಸಲು ಅರ್ಹನು ಎಂದರ್ಥ; 'ತಸ್ಯೈಷ ಆತ್ಮಾ ವಿಶತಿ ಬ್ರಹ್ಮಧಾಮ' ಎಂದು ಮುಂಡಕಶ್ರುತಿಯು (೩, ೨, ೪) ಹೇಳುತ್ತದೆ.]

೧೪. (ನಚಿಕೇತ): ಧರ್ಮಕ್ಕಿಂತ[1] ಭಿನ್ನವೂ, ಅಧರ್ಮಕ್ಕಿಂತ[2] ಭಿನ್ನವೂ, ಇವುಗಳ (ಸಾಧಕನಿಗಿಂತ ಭಿನ್ನವೂ), ಈ ಕೃತಾಕೃತಗಳಿಗಿಂತ[3] ಭಿನ್ನವೂ, ಭೂತಭವಿಷ್ಯಗಳಿಗಿಂತ ಭಿನ್ನವೂ ಆದ ಯಾವುದನ್ನು ನೋಡಿರುವೆಯೊ ಅದನ್ನು ಹೇಳು.

[ಹೊಂದಲ್ಪಡುವ ಪರಮಾತ್ಮಸ್ವರೂಪವನ್ನೂ, ಹೊಂದುವ ಸಾಧಕನ ಸ್ವರೂಪವನ್ನೂ, ಹೊಂದಲು ಬೇಕಾದ ಸಾಧನದ ಸ್ವರೂಪವನ್ನೂ ನಿಷ್ಕರ್ಷಿಸಲು ನಚಿಕೇತನು ಪುನಃ ಪ್ರಶ್ನೆಮಾಡುತ್ತಾನೆ.
[1] ಪ್ರಸಿದ್ಧವಾದ ಸಾಧನಕ್ಕಿಂತ ವಿಲಕ್ಷಣವಾದ ಸಾಧನ.
[2] ಪ್ರಸಿದ್ಧವಾದ ಫಲಗಳಿಗಿಂತ ವಿಲಕ್ಷಣವಾದ ಫಲ.
[3] ಮಾಡಲ್ಪಟ್ಟ ಮತ್ತು ಮಾಡದೆ ಇರುವ ಧರ್ಮಾದಿಗಳಿಗಿಂತ ಭಿನ್ನವೂ.]

೧೫. (ಯಮ): ಎಲ್ಲ ವೇದಗಳು ಯಾವ ಪದವನ್ನು[1] ಪ್ರತಿಪಾದಿಸುತ್ತವೆಯೊ, ಎಲ್ಲ ತಪಸ್ಸುಗಳು[2] ಯಾವ ಪದವನ್ನು ಹೇಳುತ್ತವೆಯೊ, ಯಾವುದನ್ನು ಇಚ್ಛಿಸುತ್ತ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೊ, ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ: ಇದು ಓಂ[3] ಎಂಬುದು.

[ಪ್ರಾಪ್ಯಸ್ವರೂಪದ ವೈಭವವನ್ನು ಪ್ರಕಾಶಿಸಲು ಯಮನು ಹೇಳುತ್ತಾನೆ.
[1] ಪ್ರಾಪ್ಯದ ಸ್ವರೂಪ.
[2] ತಪಃಪ್ರಧಾನವಾದ ವೇದದ ಉತ್ತರಭಾಗಗಳು.
[3] ಈ ಮಂತ್ರವು ಪ್ರಾಪ್ಯಸ್ವರೂಪವನ್ನು ಪ್ರಕಾಶಿಸಲು ಹೊರಟಿದ್ದರೂ ಅರ್ಥಾತ್ ಪ್ರಣವದ ಪ್ರಶಂಸೆಯನ್ನೂ ಮಾಡಿದೆ. ಗೀತೆಯು 'ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' ಎಂದು ಹೇಳಿದೆ. ಪ್ರಣವವು ಬ್ರಹ್ಮದ ವಾಚಕವು. ಪ್ರಣವದ ಅವಯವಗಳಾದ ಅಕಾರಮಕಾರಗಳು ಬ್ರಹ್ಮವನ್ನೂ ಜೀವವನ್ನೂ ಸೂಚಿಸುವುದರಿಂದ ಸಾಧಕನ ಮತ್ತು ಸಾಧನದ ಉಪದೇಶವು ಇದೇ ಎಂದು ತಿಳಿಯಬೇಕು.]

೧೬. ಈ ಅಕ್ಷರವೇ ಬ್ರಹ್ಮ,[1] ಈ ಅಕ್ಷರವೇ ಪರ;[2] ಈ ಅಕ್ಷರವನ್ನೇ ತಿಳಿದುಕೊಂಡು ಯಾವನು ಯಾವುದನ್ನು ಬಯಸುತ್ತಾನೆಯೊ ಅವನಿಗೆ ಅದೇ ಆಗುವುದು.

[ಯಮನು ಎರಡು ಮಂತ್ರಗಳಿಂದ ಪ್ರಣವವನ್ನು ಸ್ತುತಿಸುತ್ತಾನೆ.

[೧] ಬ್ರಹ್ಮಪ್ರಾಪ್ತಿಗೆ ಸಾಧನವಾದುದರಿಂದ ಬ್ರಹ್ಮವೇ. ಬ್ರಹ್ಮಪ್ರಾಪ್ತಿಯನ್ನು ಸಾಧಿಸುವ ಧ್ಯಾನಕ್ಕೆ ಇದೇ ಆಲಂಬನೆ. 'ಓಮಿತ್ಯನೇನೈವಾಕ್ಷರೇಣ ಪರಮಪುರುಷಮಭಿಧ್ಯಾಯೀತ' ಎಂದು ಪ್ರಶ್ನೋಪನಿಷತ್ ಹೇಳುತ್ತದೆ.

[೨] ಜಪಕ್ಕೆ ಮತ್ತು ಧ್ಯಾನಕ್ಕೆ ಅರ್ಹವಾದ ಪದಗಳಲ್ಲಿ ಶ್ರೇಷ್ಠವಾದುದು.]

೧೭. ಇದು ಶ್ರೇಷ್ಠವಾದ ಆಲಂಬನೆ,[೧] ಇದು ಪರವಾದ ಆಲಂಬನೆ,[೨] ಈ ಆಲಂಬನೆಯನ್ನು ತಿಳಿದುಕೊಂಡು ಬ್ರಹ್ಮಲೋಕದಲ್ಲಿ ಮಹಿಮೆಯನ್ನು ಹೊಂದುತ್ತಾನೆ.

[[೧] ಓಂಕಾರರೂಪವಾದ ಆಲಂಬನೆ.

[೨] ಇದನ್ನೇ ಆಲಂಬನೆಯಾಗಿ ಉಳ್ಳ ಧ್ಯಾನಾದಿಗಳು ಸರ್ವೋತ್ಕೃಷ್ಟವಾದುವು.]

೧೮. ಜ್ಞಾನಿಯು ಹುಟ್ಟುವುದೂ ಇಲ್ಲ,[೧] ಸಾಯುವುದೂ ಇಲ್ಲ;[೨] ಇವನು ಯಾವುದರಿಂದಲೂ ಹುಟ್ಟಲಿಲ್ಲ,[೩] (ಪೂರ್ವದಲ್ಲಿಯೂ ಮನುಷ್ಯಾದಿ ರೂಪದಿಂದ) ಇವನು ಹುಟ್ಟಲಿಲ್ಲ.[೪] ಈತನು ಜನ್ಮರಹಿತನು, ನಿತ್ಯನು, ಶಾಶ್ವತನು, ಪುರಾಣನು; ಶರೀರವು ನಾಶವಾದರೂ ನಾಶವಾಗುವುದಿಲ್ಲ.

[[೧] ಇದಕ್ಕೆ ಕಾರಣ ಅವನು ಜನ್ಮರಹಿತನಾಗಿರುವುದು.

[೨] ಇದಕ್ಕೆ ಕಾರಣ ಅವನು ನಿತ್ಯನಾಗಿರುವುದು.

[೩] ಇದಕ್ಕೆ ಕಾರಣ ಅವನು ಶಾಶ್ವತನಾಗಿರುವುದು.

[೪] ಪೂರ್ವದಲ್ಲಿ ಹುಟ್ಟಲಿಲ್ಲ ಎನ್ನುವುದಕ್ಕೆ ಕಾರಣ ಇವನು ಪುರಾಣನಾಗಿರುವುದು.]

೧೯. ಕೊಲ್ಲುವವನು[೧] ಕೊಲ್ಲುವುದಕ್ಕೆ ಯೋಚನೆಮಾಡಿದರೆ, ಕೊಲ್ಲಲ್ಪಟ್ಟವನು[೨] (ತನ್ನನ್ನು) ಕೊಲ್ಲಲ್ಪಟ್ಟವನನ್ನಾಗಿ ಭಾವಿಸಿದರೆ, ಅವರಿಬ್ಬರೂ (ಆತ್ಮಸ್ವರೂಪವನ್ನು) ಅರಿಯರು. ಇವನು (ಆತ್ಮನನ್ನು) ಕೊಲ್ಲುವುದೂ ಇಲ್ಲ, (ಆತ್ಮವು) ಕೊಲ್ಲಲ್ಪಡುವುದೂ ಇಲ್ಲ.

[[೧] ದೇಹವನ್ನೇ ಆತ್ಮವೆಂದು ತಿಳಿದವನು 'ನಾನು ಕೊಲ್ಲುತ್ತೇನೆ' ಎಂದು ಭಾವಿಸುತ್ತಾನೆ.

[೨] ಅವಯವಗಳು ಕತ್ತರಿಸಲ್ಪಟ್ಟಾಗ ದೇಹವನ್ನೇ ಆತ್ಮವೆಂದು ತಿಳಿದವನು 'ನಾನು ಕೊಲ್ಲಲ್ಪಟ್ಟೆನು' ಎಂದು ಭಾವಿಸುತ್ತಾನೆ.]

೨೦. ಅಣುವಿಗಿಂತ ಅಣುವಾದ,[೧] ಮಹತ್ತಿಗಿಂತ ಮಹತ್ತಾದ,[೨] ಈ ಜೀವವನ್ನು[೩] (ಪ್ರವೇಶಿಸಿ ಆಳುತ್ತಿರುವ) ಆತ್ಮನು ಹೃದಯಗುಹೆಯಲ್ಲಿ ಸ್ಥಿತನಾಗಿರುವನು. ಕಾಮ್ಯಕರ್ಮಾದಿರಹಿತನಾದವನು (ಧಾರಕನಾದ) ಪರಮಾತ್ಮನ ಅನುಗ್ರಹದಿಂದ ಅಂತಹ ಪರಮಾತ್ಮನ ಮಹಿಮೆಯನ್ನು[೪] ಯಾವಾಗ ನೋಡುತ್ತಾನೆಯೊ ಆಗ ಶೋಕವಿಲ್ಲದವನಾಗುವನು.

[ಹಿಂದಿನ ಎರಡು ಮಂತ್ರಗಳಲ್ಲಿ ಜೀವಾತ್ಮಸ್ವರೂಪವನ್ನು ಉಪದೇಶಿಸಿ ಈಗ ಜೀವದ ಆತ್ಮವಾದ ಪರಮಾತ್ಮಸ್ವರೂಪವನ್ನು ಉಪದೇಶಿಸಿದೆ.

[೧] ಎಲ್ಲ ಅಚೇತನವಸ್ತುಗಳಿಗಿಂತಲೂ ಸೂಕ್ಷ್ಮವಾದ ಜೀವಕ್ಕಿಂತ ಸೂಕ್ಷ್ಮತರನಾಗಿರುವನು.

[೨] ಇವನಿಂದ ವ್ಯಾಪ್ತವಾಗದ ವಸ್ತುವೇ ಇಲ್ಲ.

[೩] 'ನ ಜಾಯತೇ ಮ್ರಿಯತೇ ವಾ' ಎಂಬ ಎರಡು ಮಂತ್ರಗಳಲ್ಲಿ ನಿರ್ದಿಷ್ಟವಾದ.

[೪] ಜೀವಾತ್ಮನಿಗೆ ಸರ್ವಜ್ಞತ್ವವೇ ಮೊದಲಾದ ಗುಣಗಳನ್ನು ಅನುಗ್ರಹಿಸುವ ಮಹಿಮೆಯುಳ್ಳವನು.]

೨೧. ಆತ್ಮನು ಕುಳಿತುಕೊಂಡು ದೂರಹೋಗುತ್ತಾನೆ, ಮಲಗಿಕೊಂಡು ಎಲ್ಲೆಲ್ಲಿಯೂ ಹೋಗುತ್ತಾನೆ.[೧] ಹರ್ಷಾಹರ್ಷ ವಿರುದ್ಧಗುಣಗಳ ಮಧ್ಯದಲ್ಲಿರುವ[೨] ಆ ದೇವನನ್ನು ನನಗಿಂತ ಬೇರೆ ಯಾವನು ತಿಳಿಯಬಲ್ಲನು?

[ಹಿಂದಿನ ಮಂತ್ರದಲ್ಲಿ ಧಾತುಪ್ರಸಾದವೆಂಬ ಪದದಿಂದ ಹೇಳಲ್ಪಟ್ಟ ಭಗವದನುಗ್ರಹವು ಇಲ್ಲದವನಿಗೆ ಪರಮಾತ್ಮತತ್ತ್ವವು ಗೋಚರವಾಗುವುದಿಲ್ಲ ಎಂಬುದನ್ನು ಯಮನು ತಿಳಿಸುತ್ತಾನೆ.

[೧] ಇತರ ಸ್ಥಳದಲ್ಲಿ ವಿರುದ್ಧವಾಗಿ ಕಂಡುಬರುವ ಗುಣಗಳು ಜೀವದ್ವಾರಾ ಪರಮಾತ್ಮನಲ್ಲಿ ಇರುವುವು.

[೨] ಹರ್ಷಾಹರ್ಷಗಳಿಂದ ಸೋಂಕಲ್ಪಡದ.]

೨೨. ಅಶರೀರಿಯೂ,[೧] ಅಸ್ಥಿರವಾದ ಶರೀರಗಳಲ್ಲಿ ನಿತ್ಯನಾಗಿ ಇರುವವನೂ, ಮಹಾವೈಭವಶಾಲಿಯೂ ಆದ ಆತ್ಮನನ್ನು ತಿಳಿದುಕೊಂಡು ಧೀರನು ಶೋಕಿಸುವುದಿಲ್ಲ.

[[೧] ಕರ್ಮಕೃತವಾದ ಶರೀರವಿಲ್ಲದವನೂ.]

೨೩. ಈ ಆತ್ಮನು ಪ್ರವಚನದಿಂದಾಗಲಿ,[೧] ನಿದಿಧ್ಯಾಸನದಿಂದಾಗಲಿ, ಬಹಳ ಶ್ರವಣದಿಂದಾಗಲಿ ಲಭ್ಯನಲ್ಲ; ಪರಮಾತ್ಮನು ಯಾವನನ್ನು ಆರಿಸು

ತ್ತಾನೆಯೊ, (ಆಯ್ಕೆಗೊಂಡ) ಅವನಿಂದಲೇ (ಪರಮಾತ್ಮನು) ಲಭ್ಯನು.[೨] ಆ ಉಪಾಸಕನಿಗೆ ಈ ಪರಮಾತ್ಮನು ತನ್ನ ಸ್ವರೂಪವನ್ನು ಪ್ರಕಾಶಿಸುತ್ತಾನೆ.

[ಪರಮಾತ್ಮನನ್ನು ಹೊಂದುವ ಉಪಾಯಗಳನ್ನು ಈ ಮಂತ್ರದಲ್ಲಿ ಹೇಳಿದೆ.

[೧] ಇಲ್ಲಿ ಪ್ರವಚನಶಬ್ದದಿಂದ ಮನನವೆಂದು ತಿಳಿದುಕೊಳ್ಳಬೇಕು. ಏಕೆಂದರೆ ಅಧ್ಯಾಪನಾರೂಪವಾದ ಪ್ರವಚನವು ಆತ್ಮಪ್ರಾಪ್ತಿಗೆ ಕಾರಣವಾಗಲಾರದು.

[೨] ಯಾವನು ಪರಮಾತ್ಮನ ಪ್ರಿಯತಮನೊ ಅವನನ್ನೇ ಪರಮಾತ್ಮನು ಆರಿಸುತ್ತಾನೆ. ಯಾವನು ಭಗವಂತನಲ್ಲಿ ಪ್ರೀತಿಯುಳ್ಳವನಾಗಿರುವನೊ ಅವನೇ ಭಗವಂತನಿಗೆ ಪ್ರಿಯತಮನಾಗುತ್ತಾನೆ. ಆದುದರಿಂದ ಉಪಾಸಕನಿಗೆ ಭಗವಂತನಲ್ಲಿರುವ ಪ್ರೀತಿಯು ಭಗವಂತನಿಗೆ ಅವನಲ್ಲಿ ಪ್ರೀತಿಯನ್ನು ಉಂಟುಮಾಡಿ ಪರಮಾತ್ಮಪ್ರಾಪ್ತಿಗೆ ಕಾರಣವಾಗುತ್ತದೆ.]

**೨೪.** ದುರಾಚಾರದಿಂದ ನಿವೃತ್ತನಾಗದವನೂ, ಶಾಂತನಲ್ಲದವನೂ, ಸಮಾಹಿತನಲ್ಲದವನೂ, ಮನಃಶಾಂತಿ ಇಲ್ಲದವನೂ, ಪ್ರಜ್ಞಾನದಿಂದ ಇವನನ್ನು[೧] ಪಡೆಯಲಾರನು.[೨]

[ಪರಮಾತ್ಮಪ್ರಾಪ್ತಿಗೆ ಕಾರಣವಾದ ಉಪಾಸನೆಗೆ ಅಂಗವಾಗಿರುವ ಕೆಲವು ಧರ್ಮಗಳನ್ನು ಯಮನು ಉಪದೇಶಿಸುತ್ತಾನೆ.

[೧] ಪರಮಾತ್ಮನನ್ನು.

[೨] ಯಾವನು ಪುರುಷಾರ್ಥರೂಪವಾದ ದುರಾಚಾರನಿವೃತ್ತಿಯನ್ನು ಮಾಡದೆ ಪರಮಾತ್ಮೋಪಾಸನೆಯನ್ನು ಮಾಡುತ್ತಾನೆಯೊ ಅವನಿಗೆ ಉಪಾಸನೆಯು ಫಲವನ್ನು ಕೊಡುವುದಿಲ್ಲ.]

**೨೫.** ಯಾವನಿಗೆ ಬ್ರಾಹ್ಮಣಕ್ಷತ್ರಿಯರು[೧] ಅನ್ನವಾಗಿರುವರೊ[೨] ಯಾವನಿಗೆ ಮೃತ್ಯುವು ಉಪಸೇಚನವಾಗಿರುವುದೊ[೩] ಆ ಪರಮಾತ್ಮನು ಎಲ್ಲಿರುವನೆಂಬುದನ್ನು[೪] ಹೀಗೆಂದು ಯಾವನು ಅರಿಯುವನು?

[[೧] ಚರಾಚರ ಜಗತ್ತು.

[೨] ಯಾವನಿಂದ ನಾಶವಾಗುವರೊ.

[೩] ಯಾವ ಮೃತ್ಯುವು ತಾನೇ ನಾಶವಾಗುತ್ತಿದ್ದರೂ ಇತರ ವಸ್ತುಗಳ ನಾಶದ ದ್ವಾರಾ ಪರಮಾತ್ಮನಿಗೆ ಸಹಾಯಕನಾಗಿರುವನೊ.

[೪] ಯಾವ ಪ್ರಕಾರದಲ್ಲಿ ಸ್ಥಿತನಾಗಿರುವನೊ ಎಂದರೆ ಯಾವ ಪ್ರಕಾರಗಳಿಂದ ಕೂಡಿರುವನೊ.]

# ಮೂರನೆಯ ವಲ್ಲೀ

೧. ಋತವನ್ನು[೧] ಅನುಭವಿಸುತ್ತಿರುವ ಮತ್ತು ಸುಕೃತಸಾಧ್ಯವಾದ ಈ ಲೋಕದಲ್ಲಿ ಅತ್ಯಂತ ಉತ್ಕೃಷ್ಟವಾದ ಹೃದಯಾಕಾಶವನ್ನು ಪ್ರವೇಶಿಸಿರುವ ಇವರಿಬ್ಬರನ್ನು ನೆರಳುಬಿಸಿಲುಗಳೆಂದು[೨] ಮೂರು ಅನುವಾಕಗಳನ್ನು ಅಧ್ಯಯನಮಾಡಿರುವವರೂ ಪಂಚಾಗ್ನಿಗಳೂ[೩] ಆದ ಬ್ರಹ್ಮಜ್ಞಾನಿಗಳು[೪] ಹೇಳುತ್ತಾರೆ.

[ಹಿಂದಿನ ವಲ್ಲಿಯ ಕೊನೆಯ ಮಂತ್ರದಲ್ಲಿ ಹೇಳಿರುವಂತೆ ಬ್ರಹ್ಮನ ಸ್ವರೂಪವು ಹೀಗೆಯೇ ಇದೆ ಎಂದು ಹೇಳಲು ಕಷ್ಟವಾದರೆ ಬ್ರಹ್ಮೋಪಾಸನೆಯನ್ನು ಮಾಡಲು ಸಾಧ್ಯವಾಗುವುದಿಲ್ಲ; ಹೀಗೆ ಸಂದೇಹಪಡುತ್ತಿದ್ದ ನಚಿಕೇತನಿಗೆ ಎರಡು ಮಂತ್ರಗಳ ಮೂಲಕ ಎಲ್ಲರಿಗೂ ಉಪಾಸನೆಯು ಸಾಧ್ಯವೆಂದು ಯಮನು ಉಪದೇಶಿಸುತ್ತಾನೆ. ಏಕೆಂದರೆ ಉಪಾಸ್ಯವಸ್ತುವೂ ಉಪಾಸಕನೂ ಒಂದೇ 'ಗುಹೆ'ಯನ್ನು ಪ್ರವೇಶಿಸಿರುವುದರಿಂದ ಪರಮಾತ್ಮೋಪಾಸನೆಯನ್ನು ಸುಲಭವಾಗಿ ಮಾಡಬಹುದು.

೧ ಸತ್ಯಪದದಿಂದ ಹೇಳಲ್ಪಡುವ ಅವಶ್ಯಂಭಾವಿಯಾದ ಕರ್ಮಫಲವನ್ನು.

೨ 'ನೆರಳು' (ಛಾಯಾ) ಎಂಬ ಶಬ್ದವು ಅಜ್ಞನಾದ ಜೀವನನ್ನು ನಿರ್ದೇಶಿಸುತ್ತದೆ; ಹಾಗೆಯೇ 'ಬಿಸಿಲು' (ಆತಪ) ಎಂಬ ಶಬ್ದವು ಪರಮಾತ್ಮನನ್ನು ಸೂಚಿಸುತ್ತದೆ. ಜೀವನನ್ನು 'ಅಜ್ಞ'-ಶಬ್ದದಿಂದ ನಿರ್ದೇಶಿಸಿರುವುದರ ಅಭಿಪ್ರಾಯವು ಇದು: ಉಪಾಸ್ಯವಸ್ತುವೂ ಉಪಾಸಕನೂ ಒಂದೇ ಗುಹೆಯಲ್ಲಿದ್ದರೆ, ಅವರೇ ಪ್ರಾಪ್ಯವೂ ಪ್ರಾಪ್ತಿಯನ್ನು ಹೊಂದುವವನೂ ಆದರೆ, ಆ ಪ್ರಾಪ್ತಿಗೆ ಸಾಧನವಾದ ರಥವೆಂದು ಹೇಳಲ್ಪಟ್ಟ ಶರೀರದಲ್ಲಿ ಪ್ರಾಪ್ಯವು ಇರುವುದು ಸರಿಯಲ್ಲ; ಏಕೆಂದರೆ ರಥದ ಸಹಾಯದಿಂದ ಹೊಂದುವ ವಸ್ತುವು ರಥದಲ್ಲಿಯೇ ಇರುವುದು ಅಸಂಭವ. ಹೀಗೆ ಸಂದೇಹಪಡಬೇಕಾಗಿಲ್ಲ. ಪ್ರಾಪ್ಯನಾದ ಪರಮಾತ್ಮನು ಅಲ್ಲಿಯೇ ಇದ್ದರೂ 'ಪರಮಾತ್ಮನ ಇಚ್ಛೆಯ ಪ್ರಕಾರ ಅವನು ತಿರೋಹಿತನಾಗಿದ್ದಾನೆ' (೩,೨,೪) ಎಂಬ ಬ್ರಹ್ಮಸೂತ್ರದ ಪ್ರಕಾರ ಪರಮಾತ್ಮ ಸಂಕಲ್ಪದಿಂದ ಉಂಟಾದ ಕರ್ಮರೂಪವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟಿರುವುದರಿಂದ ಭಗವದನುಭವಲಕ್ಷಣವಾದ ಪ್ರಾಪ್ತಿಯು ಅವನಿಗೆ ಇರುವುದಿಲ್ಲ. ಆದುದರಿಂದ ಒಂದೇ ಗುಹೆಯಲ್ಲಿ ಜೀವಪರಮಾತ್ಮರು ಇರುವರೆಂಬುದರಲ್ಲಿ ಯಾವ ವಿರೋಧವೂ ಇಲ್ಲ.

೩ ಪಂಚಾಗ್ನಿಗಳ ಸೇವೆಯ ಮೂಲಕ ಶುದ್ಧವಾದ ಅಂತಃಕರಣವನ್ನು ಹೊಂದಿದವರು.

೪ ಕೇವಲ ಪಂಚಾಗ್ನಿಗಳಾಗಿ ತ್ರಿಣಾಚಿಕೇತರಾದವರಿಗೆ ಪರಮಾತ್ಮನನ್ನು ಪ್ರತಿಪಾದಿಸುವ ಸಾಮರ್ಥ್ಯವಿರುವುದಿಲ್ಲ.]

೨. ಯಾವುದು ಯಜ್ಞಮಾಡುವವರಿಗೆ ಸೇತುವೆಯಂತಿರುವುದೊ, ಯಾವ ಅಕ್ಷರವು ಪರಬ್ರಹ್ಮವೊ, ಯಾವುದು ದಾಟಲಿಚ್ಛಿಸುವವರಿಗೆ ಭಯವಿಲ್ಲದ ದಡವಾಗಿರುವುದೊ, ಯಾವುದನ್ನು ನಾಚಿಕೇತಾಗ್ನಿಯಿಂದ ಹೊಂದಬಹುದೊ ಅದನ್ನು ಉಪಾಸಿಸಲು ಶಕ್ತರಾಗಿರುವೆವು.

[ಆದುದರಿಂದ ಉಪಾಸನೆಮಾಡುವುದು ಕಷ್ಟವೆಂದು ಹೆದರಬಾರದು.]

೩. ಆತ್ಮನನ್ನು[೧] ರಥಿಯೆಂದೂ, ಶರೀರವನ್ನು ರಥವೆಂದೂ, ಬುದ್ಧಿಯನ್ನು ಸಾರಥಿಯೆಂದೂ,[೨] ಮನಸ್ಸನ್ನು ಕಡಿವಾಣವೆಂದೂ ತಿಳಿ.

[ಈ ಮಂತ್ರದಲ್ಲಿ ವಿಷ್ಣುವಿನ ಪರಮಪದಪ್ರಾಪ್ತಿಗೆ ಬೇಕಾದ ಪರಿಕರವನ್ನು ಉಪದೇಶಿಸಲು, ಪ್ರಾಪ್ತೃವಾದ ಜೀವನ ಸ್ವರೂಪವನ್ನು ಉಪದೇಶಿಸಿದೆ.

[೧] ಶರೀರದ ಅಧಿಪತಿಯನ್ನು.

[೨] ಶರೀರದ ಪ್ರವೃತ್ತಿಗಳೆಲ್ಲವೂ ಬುದ್ಧಿಶಬ್ದವಾಚ್ಯವಾದ ಅಧ್ಯವಸಾಯಕ್ಕೆ ಒಳಪಟ್ಟಿರುವುದರಿಂದ ಬುದ್ಧಿಯು ಸಾರಥಿ ಎಂದು ಹೇಳಲ್ಪಟ್ಟಿದೆ.]

೪. ಇಂದ್ರಿಯಗಳನ್ನು ಕುದುರೆಗಳೆಂದೂ, ವಿಷಯಗಳನ್ನು ಅವುಗಳ ಮಾರ್ಗಗಳೆಂದೂ, ಶರೀರೇಂದ್ರಿಯಮನಸ್ಸುಗಳಿಂದ ಕೂಡಿದ ಆತ್ಮನನ್ನು ಭೋಕ್ತೃವೆಂದೂ[೧] ವಿವೇಕಿಗಳು ಹೇಳುತ್ತಾರೆ.

[[೧] ಕರ್ತೃತ್ವ ಭೋಕ್ತೃತ್ವಗಳನ್ನು ಹೊಂದಿರುವವನು; ಕೇವಲ ಆತ್ಮನಿಗೆ ಕರ್ತೃತ್ವವಾಗಲಿ ಭೋಕ್ತೃತ್ವವಾಗಲಿ ಇರುವುದಿಲ್ಲ.]

೫-೬. ಯಾವನು ಯಾವಾಗಲೂ ಅಯುಕ್ತವಾದ ಮನಸ್ಸಿನಿಂದ ಕೂಡಿ ಅಜ್ಞಾನಿಯಾಗಿರುವನೊ ಅವನ ಇಂದ್ರಿಯಗಳು ಸಾರಥಿಯ ತುಂಟ ಕುದುರೆಗಳಂತೆ ವಶವಾಗದೆ ಇರುವುವು. ಆದರೆ ಯಾವನು ಯಾವಾಗಲೂ ಯುಕ್ತವಾದ ಮನಸ್ಸಿನಿಂದ ಕೂಡಿ ವಿಜ್ಞಾನಿಯಾಗಿರುವನೊ ಅವನ ಇಂದ್ರಿಯಗಳು ಸಾರಥಿಯ ಪಳಗಿದ ಕುದುರೆಗಳಂತೆ ವಶವಾಗಿರುವುವು.

೭-೮. ಯಾವನು ಯಾವಾಗಲೂ ಅಜ್ಞಾನಿಯೂ, ನಿಗ್ರಹಿಸದ ಮನಸ್ಸುಳ್ಳವನೂ, ಅಶುಚಿಯೂ[೧] ಆಗಿರುವನೊ ಅವನು ಆ ಪದವನ್ನು ಹೊಂದುವುದಿಲ್ಲ, ಸಂಸಾರವನ್ನು ಹೊಂದುತ್ತಾನೆ; ಆದರೆ ಯಾವನು ಯಾವಾಗಲೂ ವಿಜ್ಞಾನಿಯೂ, ನಿಗ್ರಹಿಸಿದ ಮನಸ್ಸುಳ್ಳವನೂ, ಶುಚಿಯೂ ಆಗಿರುವನೊ ಅವನು ಆ ಪದವನ್ನು ಹೊಂದುತ್ತಾನೆ, ಪುನಃ ಹುಟ್ಟುವುದಿಲ್ಲ.

[ಈ ಎರಡು ಮಂತ್ರಗಳಲ್ಲಿ ಕುದುರೆಯೆಂದು ಕಲ್ಪಿಸಲ್ಪಟ್ಟ ಇಂದ್ರಿಯಗಳ ನಿಗ್ರಹಾನಿಗ್ರಹಗಳ ಪ್ರಯೋಜನವನ್ನು ಹೇಳಿದೆ.

[೧] ವಿಪರೀತಚಿಂತೆಯ ಪ್ರಾವಣ್ಯದಿಂದ.]

**೯.** ಯಾವನು ವಿಜ್ಞಾನವೆಂಬ ಸಾರಥಿಯನ್ನೂ, ಮನಸ್ಸೆಂಬ ಕಡಿವಾಣವನ್ನೂ ಹೊಂದಿರುವನೊ ಅವನು ಸಂಸಾರಗತಿಯ ಕೊನೆಯಾದ ಆ ವಿಷ್ಣುವಿನ ಪರಮಪದವನ್ನು ಹೊಂದುತ್ತಾನೆ.

**೧೦–೧೧.** ಇಂದ್ರಿಯಗಳಿಗಿಂತ ವಿಷಯಗಳು ಪ್ರಧಾನವಾದುವು,[೧] ವಿಷಯಗಳಿಗಿಂತ ಮನಸ್ಸು ಪ್ರಧಾನವಾದುದು,[೨] ಮನಸ್ಸಿಗಿಂತ ಬುದ್ಧಿಯು ಪ್ರಧಾನವಾದುದು,[೩] ಬುದ್ಧಿಗಿಂತ ಪ್ರಧಾನವಾದುದು ಮಹತ್ ಎಂಬ ಆತ್ಮ;[೪] ಮಹತ್ ಆತ್ಮನಿಗಿಂತ ಅವ್ಯಕ್ತವು[೫] ಪ್ರಧಾನವಾದುದು, ಅವ್ಯಕ್ತಕ್ಕಿಂತ ಪುರುಷನು ಪ್ರಧಾನನು, ಪುರುಷನಿಗಿಂತ[೬] ಪ್ರಧಾನವಾದುದು ಯಾವುದೂ ಇಲ್ಲ; ಅದೇ ಕೊನೆ,[೭] ಅದೇ ಪರಾ ಗತಿ.

[[೧] ಏಕೆಂದರೆ ಜಿತೇಂದ್ರಿಯನಾದರೂ ವಿಷಯಸನ್ನಿಧಿಯಲ್ಲಿ ಇಂದ್ರಿಯಗಳನ್ನು ನಿಗ್ರಹಿಸಲು ಕಷ್ಟವಾಗುತ್ತದೆ.

[೨] ಏಕೆಂದರೆ ಮನಸ್ಸಿಗೆ ವಿಷಯಗಳ ಕಡೆಗೆ ಪ್ರಾವಣ್ಯತೆ ಇರುವಾಗ ವಿಷಯಗಳು ಸಮೀಪದಲ್ಲಿ ಇಲ್ಲದಿದ್ದರೂ ಇಂದ್ರಿಯಗಳ ನಿಗ್ರಹ ಕಷ್ಟವಾಗುತ್ತದೆ.

[೩] ಏಕೆಂದರೆ ಬುದ್ಧಿಯ ಅಧ್ಯವಸಾಯವಿಲ್ಲದಿರುವಾಗ ಮನಸ್ಸಿಗೆ ಯಾವ ಶಕ್ತಿಯೂ ಇರುವುದಿಲ್ಲ.

[೪] ಮಹತ್ ಆತ್ಮ ಎಂದರೆ ಜೀವಾತ್ಮ. ಜೀವಾತ್ಮನು ಕರ್ತೃವಾಗಿರುವುದರಿಂದ ಎಲ್ಲವೂ ಅವನ ಇಚ್ಛೆಯಂತೆಯೇ ನಡೆಯುತ್ತದೆ. ಆದುದರಿಂದ ಅವನನ್ನು 'ಮಹತ್' ಎಂಬ ವಿಶೇಷಣದಿಂದ ಶ್ರುತಿಯು ಕರೆದಿದೆ.

[೫] ಅವ್ಯಕ್ತವೆಂದರೆ ರಥರೂಪಿತವಾದ ಶರೀರ. ಜೀವಾತ್ಮನು ಸಾಧಿಸಬೇಕಾದ ಸಕಲಪುರುಷಾರ್ಥಗಳ ಪ್ರವೃತ್ತಿಗಳೂ ಶರೀರವನ್ನೇ ಆಶ್ರಯಿಸಿರುವುದರಿಂದ ಶರೀರವು ಜೀವಾತ್ಮನಿಗಿಂತ ಪ್ರಧಾನವೆಂದು ಹೇಳಿದೆ.

[೬] ಪುರುಷನೆಂದರೆ ಎಲ್ಲವುಗಳ ಅಂತರಾತ್ಮನೂ, ಅಂತರ್ಯಾಮಿಯೂ ಆದ ಪರಮಪುರುಷ. ಜೀವಾತ್ಮರ ಸಕಲಪ್ರವೃತ್ತಿಗಳೂ ಇವನನ್ನೇ ಅವಲಂಬಿಸಿವೆ. ಇವನು ಜೀವಾತ್ಮನ ಅಂತರ್ಯಾಮಿಯಾಗಿ ಉಪಾಸನೆಯು ಉಂಟಾಗುವಂತೆ ಮಾಡುತ್ತಾನೆ.

[೭] ಉಪಾಸನೆಯನ್ನುಂಟುಮಾಡುವ ಸಾಧನೆಗಳಲ್ಲಿ ಪರಮಪ್ರಾಪ್ಯನಾದ ಪರಮಪುರುಷನಿಗಿಂತ ಪ್ರಧಾನವಾದದ್ದು ಯಾವುದೂ ಇಲ್ಲ.]

೧೨. ಎಲ್ಲ ಪ್ರಾಣಿಗಳಲ್ಲಿಯೂ ಗೂಢನಾಗಿಯೂ[೧] ಆತ್ಮನಾಗಿಯೂ ಇರುವ ಇವನು ಪ್ರಕಾಶಿಸುವುದಿಲ್ಲ;[೨] ಆದರೆ ಸೂಕ್ಷ್ಮದರ್ಶಿಗಳು ಏಕಾಗ್ರವೂ ಸೂಕ್ಷ್ಮವೂ ಆದ ಬುದ್ಧಿಯಿಂದ ಇವನನ್ನು ನೋಡುತ್ತಾರೆ.

[[೧] ಮಾಯೆಯ ಮೂರು ಗುಣಗಳಿಂದ ಮುಚ್ಚಲ್ಪಟ್ಟು.

[೨] ಹೊರಗಿನ ಮತ್ತು ಒಳಗಿನ ಇಂದ್ರಿಯಗಳನ್ನು ಜಯಿಸದವರಿಗೆ.]

೧೩. ವಿವೇಕಿಯು ವಾಕ್ಕನ್ನು ಮನಸ್ಸಿನಲ್ಲಿ ಸೇರಿಸಬೇಕು;[೧] ಮನಸ್ಸನ್ನು ಆತ್ಮನಲ್ಲಿರುವ ಬುದ್ಧಿಯಲ್ಲಿ ಸೇರಿಸಬೇಕು;[೨] ಬುದ್ಧಿಯನ್ನು ಮಹತ್ ಜೀವಾತ್ಮನಲ್ಲಿ ಸೇರಿಸಬೇಕು;[೩] ಮಹತ್ ಜೀವಾತ್ಮನನ್ನು ಶಾಂತನಾದ[೪] ಪರಮಾತ್ಮನಲ್ಲಿ ಸೇರಿಸಬೇಕು.[೫]

[[೧] ಒಳಗಿನ ಮತ್ತು ಹೊರಗಿನ ಇಂದ್ರಿಯಗಳ ಪ್ರವೃತ್ತಿಗಳನ್ನು ನಿಲ್ಲಿಸುವ ಪ್ರಕಾರವನ್ನೂ 'ಅಧ್ಯಾತ್ಮಯೋಗಾಧಿಗಮೇನ' (೧, ೨, ೧೨) ಎಂಬ ಮಂತ್ರದಲ್ಲಿ ಹೇಳಿರುವ ಜೀವದ ಜ್ಞಾನಪ್ರಕಾರವನ್ನೂ ಯಮನು ಉಪದೇಶಿಸುತ್ತಾನೆ. ಮನಸ್ಸಿಗೆ ವಿರೋಧವಾದ ಪ್ರವೃತ್ತಿಗಳಿಂದ ವಾಕ್ಕು ವಿಮುಖವಾಗುವಂತೆ ಮಾಡಬೇಕು.

[೨] ಬುದ್ಧಿಯ ಅಧ್ಯವಸಾಯಗಳಿಗೆ ತಕ್ಕಂತೆ ಮನಸ್ಸು ನಡೆಯುವಂತೆ ಮಾಡಬೇಕು. ವಸ್ತುಗಳು ಹೇಯವೆಂಬ ಅಧ್ಯವಸಾಯರೂಪವನ್ನು ಬುದ್ಧಿಯು ಹೊಂದಿರುತ್ತದೆ.

[೩] ಆತ್ಮನು ಉಪಾದೇಯನಾದುದರಿಂದ ಅವನನ್ನು ಸಾಕ್ಷಾತ್ಕರಿಸಬೇಕು ಎಂದು ಬುದ್ಧಿಯನ್ನು ಪ್ರೇರಿಸಬೇಕು.

[೪] ಷಡೂರ್ಮಿಗಳಿಗೆ ವಿರೋಧಿಯಾದ.

[೫] ಜೀವಾತ್ಮನು ಶೇಷಿಯಾದ ಪರಮಾತ್ಮನಿಗೆ ಶೇಷನು ಎಂದು ಅನುಸಂಧಾನ ಮಾಡಬೇಕು.]

೧೪. ಏಳಿರಿ,[೧] ಎಚ್ಚರಗೊಳ್ಳಿರಿ,[೨] ಶ್ರೇಷ್ಠರಾದ ಆಚಾರ್ಯರನ್ನು ಹೊಂದಿ ತಿಳಿದುಕೊಳ್ಳಿರಿ,[೩] ಹರಿತವಾದ ಕತ್ತಿಯ ಅಲಗು ದಾಟಲು ಕಷ್ಟವಾಗಿರುವಂತೆ ಆ ಪಥವು ದುರ್ಗಮವೆಂದು[೪] ಜ್ಞಾನಿಗಳು ಹೇಳುತ್ತಾರೆ.

[ಈ ರೀತಿ ಯಮನು ಪರಮಾತ್ಮನನ್ನು ಆಕರ್ಷಿಸುವ ಪ್ರಕಾರವನ್ನು ಹೇಳಿ ಅಧಿಕಾರಿ ಪುರುಷರ ಗಮನವನ್ನು ಸೆಳೆಯುತ್ತಾನೆ.

[೧] ಆತ್ಮಜ್ಞಾನಾಭಿಮುಖರಾಗಿ.

[೨] ಅಜ್ಞಾನವೆಂಬ ನಿದ್ರೆಯನ್ನು ನಾಶಮಾಡಿರಿ.

[೩] ಆತ್ಮತತ್ತ್ವವನ್ನು ತಿಳಿದುಕೊಳ್ಳಿರಿ.

[४] ಹರಿತವಾದ ಕತ್ತಿಯ ಅಲಗಿನ ಮೇಲೆ ನಡೆಯುವವನು ಸ್ವಲ್ಪ ಪ್ರಮಾದದಿಂದಲೂ ತನ್ನ ನಾಶವನ್ನು ಮಾಡಿಕೊಳ್ಳುವಂತೆ ಆತ್ಮಸ್ವರೂಪವನ್ನು ತಿಳಿದುಕೊಳ್ಳುವ ಸಮಯದಲ್ಲಿ ಸ್ವಲ್ಪ ಪ್ರಮಾದವಾದರೂ ಆತ್ಮನಾಶವಾಗುತ್ತದೆ.]

**೧೫.** ಯಾವಾಗಲೂ ಶಬ್ದಸ್ಪರ್ಶರೂಪರಸಗಂಧಗಳಿಲ್ಲದ, ಅವ್ಯಯನೂ ಅನಾದಿಯೂ ಅನಂತನೂ ಆದ, ಜೀವಾತ್ಮನಿಗಿಂತ ಶ್ರೇಷ್ಠನಾದ, ಧ್ರುವನಾದ ಪರಮಾತ್ಮನನ್ನು ಅರಿತುಕೊಂಡು[1] ಮೃತ್ಯುಮುಖದಿಂದ[2] ವಿಮುಕ್ತನಾಗುತ್ತಾನೆ.

[[1] ದರ್ಶನಕ್ಕೆ ಸಮಾನವಾದ ಉಪಾಸನೆಯ ಮೂಲಕ ನೋಡಿ.]
[2] ಭಯಂಕರವಾದ ಸಂಸಾರದಿಂದ.]

**೧೬.** ಮೃತ್ಯುವಿನಿಂದ ಹೇಳಲ್ಪಟ್ಟ[1] ಸನಾತನವಾದ[2] ನಾಚಿಕೇತೋಪಾಖ್ಯಾನವನ್ನು ಹೇಳಿ ಮತ್ತು ಕೇಳಿ ಮೇಧಾವಿಯು ಬ್ರಹ್ಮಲೋಕದಲ್ಲಿ ಮಹಿಮೆಯನ್ನು ಹೊಂದುತ್ತಾನೆ.

[[1] ಮೃತ್ಯುವು ಉಪದೇಶಕನು ಮಾತ್ರ. ಬ್ರಹ್ಮವಿದ್ಯೆಯ ಕರ್ತೃವಲ್ಲ.
[2] ಮೇಲೆ ಹೇಳಿದ ಕಾರಣದಿಂದಲೇ ಸನಾತನವಾದದ್ದು. ಅಪೌರುಷೇಯವಾದುದರಿಂದ ಪ್ರವಾಹರೂಪದ್ವಾರಾ ನಿತ್ಯವಾಗಿದೆ.]

**೧೭.** ಯಾವನು ಈ ಪರಮರಹಸ್ಯವನ್ನು ಬ್ರಾಹ್ಮಣರ ಸಭೆಯಲ್ಲಾಗಲೀ ಶ್ರಾದ್ಧಕಾಲದಲ್ಲಾಗಲೀ ಶುಚಿಯಾಗಿ ಶ್ರವಣಮಾಡಿಸುತ್ತಾನೆಯೋ ಅದು ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ, ಅದು ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ.

# ಎರಡನೆಯ ಅಧ್ಯಾಯ

## ನಾಲ್ಕನೆಯ ವಲ್ಲೀ

೧. ಸ್ವತಂತ್ರನಾದ ಈಶ್ವರನು ಇಂದ್ರಿಯಗಳನ್ನು ಬಹಿರ್ಮುಖವಾಗಿ ಹೋಗುವಂತೆ[೧] ಸೃಷ್ಟಿಸಿದನು; ಆದುದರಿಂದ (ಜನರು) ಹೊರಗಡೆ ನೋಡುತ್ತಾರೆ, ಅಂತರಾತ್ಮನನ್ನು ನೋಡುವುದಿಲ್ಲ. ಯಾವನೊ ಒಬ್ಬ ವಿವೇಕಿಯು[೨] ಚಕ್ಷುಸ್ಸನ್ನು[೩] ಹಿಂತಿರುಗಿಸಿ, ಅಮೃತತ್ವವನ್ನು ಬಯಸುತ್ತ, ಪ್ರತ್ಯಗಾತ್ಮನನ್ನು ನೋಡುತ್ತಾನೆ.

['ಉತ್ತಿಷ್ಠತ ಜಾಗ್ರತ' ಎಂಬ ಉತ್ಸಾಹರೂಪವಾದ ಉಪದೇಶವನ್ನು ಕೊಟ್ಟರೂ ಜನರು ಆತ್ಮವಿಮುಖರಾಗಿರುವುದನ್ನು ನೋಡಿ ಯಮನು ತನ್ನ ಶೋಕವನ್ನು ವ್ಯಕ್ತಪಡಿಸುತ್ತಾನೆ.

[೧] ಆತ್ಮನನ್ನು ಪ್ರಕಾಶಿಸದೆ ಬಾಹ್ಯವಸ್ತುಗಳನ್ನು ಪ್ರಕಾಶಿಸುತ್ತ.

[೨] ಲೋಕಸ್ವಭಾವವು ಹೀಗಿದ್ದರೂ ಪ್ರವಾಹಕ್ಕೆ ಎದುರಾಗಿ ಈಜುವಂತೆ ಯಾವನೊ ಒಬ್ಬ ಧೀರನಾದವನು ಪ್ರತ್ಯಗಾತ್ಮದ ಕಡೆಗೆ ಪ್ರವಣತೆಯನ್ನು ಹೊಂದುತ್ತಾನೆ.

[೩] ಎಲ್ಲ ಇಂದ್ರಿಯಗಳನ್ನು.]

೨. ಅಲ್ಪಬುದ್ಧಿಯುಳ್ಳವರು ಹೊರಗಿರುವ ಕಾಮಗಳನ್ನು ಅನುಸರಿಸುತ್ತಾರೆ. ಅವರು ವಿಸ್ತೀರ್ಣವಾದ ಮೃತ್ಯುವಿನ ಪಾಶವನ್ನು ಹೊಂದುತ್ತಾರೆ. ಆದುದರಿಂದ ವಿವೇಕಿಗಳು ನಿತ್ಯವಾದ ಅಮೃತತ್ವವನ್ನು ತಿಳಿದುಕೊಂಡು ಅನಿತ್ಯವಸ್ತುಗಳಲ್ಲಿ ಯಾವುದನ್ನೂ ಬಯಸುವುದಿಲ್ಲ.

[ಪ್ರತ್ಯಕ್-ತತ್ತ್ವವನ್ನು ತಿಳಿದವನು ಎಲ್ಲವನ್ನೂ ತ್ಯಾಗಮಾಡಬೇಕೆಂಬುದು ಭಾವಾರ್ಥ. ಜೀವಾತ್ಮರ ಅಹಂತ್ವವು ಪರಮಾತ್ಮನಿಗೆ ಸೇರಿರುವುದರಿಂದಲೂ, 'ಅಹಂ'-ಪದವು ಮುಖ್ಯಾರ್ಥದ ಮೂಲಕ ಪರಮಾತ್ಮನನ್ನೇ ಸೂಚಿಸುವುದರಿಂದಲೂ ಪರಮಾತ್ಮನಿಗೆ ಪ್ರತ್ಯಕ್ತ್ವ ಉಂಟೆಂಬುದು ಸಿದ್ಧಿಸಿದೆ.]

೩. ಯಾವ ಇದರಿಂದಲೇ[೧] ರೂಪವನ್ನೂ ರಸವನ್ನೂ ಗಂಧವನ್ನೂ ಶಬ್ದಗಳನ್ನೂ ಸ್ಪರ್ಶಗಳನ್ನೂ ಮಿಥುನನಿಮಿತ್ತದಿಂದ ಉಂಟಾಗುವ ಸುಖವಿಶೇಷಗಳನ್ನೂ ಅರಿಯುತ್ತಾನೆಯೊ ಅವನಿಗೆ ಇಲ್ಲಿ ಏನು ಉಳಿಯುತ್ತದೆ? ಇದೇ ಅದು.[೨]

[[೧] ಪರಮಾತ್ಮನಿಂದಲೇ.
[೨] ಈ ಮಂತ್ರದಲ್ಲಿ ಪ್ರತಿಪಾದಿಸಲ್ಪಟ್ಟ ಆತ್ಮಸ್ವರೂಪವೇ ಹಿಂದೆ ಪ್ರಾಪ್ಯವೆಂದು ನಿರ್ದಿಷ್ಟವಾದ ಆ ಪರಮಪದ.]

೪. ಯಾವನಿಂದ[೧] (ಮನುಷ್ಯರು) ಸ್ವಪ್ನಪ್ರಪಂಚವನ್ನೂ ಜಾಗ್ರತ್ಪ್ರಪಂಚವನ್ನೂ ನೋಡುತ್ತಾರೆಯೊ ಆ ವಿಭುವಾದ ಮಹಾನ್ ಆತ್ಮನನ್ನು ತಿಳಿದುಕೊಂಡು ಧೀರನು ಶೋಕಿಸುವುದಿಲ್ಲ.

[[೧] ಮನಸ್ಸು ಇಂದ್ರಿಯ ಮೊದಲಾದುವುಗಳ ಭಾವವನ್ನು ಹೊಂದಿದ ಪರಮಾತ್ಮನಿಂದ.]

೫. ಯಾವನು ಕರ್ಮಫಲವನ್ನು ಅನುಭವಿಸುವ ಜೀವಾತ್ಮನನ್ನೂ ಮತ್ತು ಅವನ ಸಮೀಪದಲ್ಲಿರುವ ಭೂತಭವಿಷ್ಯಗಳ ಒಡೆಯನನ್ನೂ[೧] ತಿಳಿಯುತ್ತಾನೆಯೊ ಅವನನ್ನು[೨] ನಿಂದಿಸಕೂಡದು. ಇದೇ ಅದು.

[[೧] ಕಾಲತ್ರಯದಲ್ಲಿಯೂ ಚಿತ್ ಅಚಿತ್ ಇವುಗಳಿಗೆ ಈಶ್ವರನಾದವನನ್ನು.]
[೨] ದುಷ್ಕೃತ್ಯಗಳನ್ನು ಮಾಡುವವನಾದರೂ.]

೬. ಮೊದಲು[೧] ಸಂಕಲ್ಪಮಾತ್ರದಿಂದಲೇ ನೀರಿನಿಂದ ಹುಟ್ಟಿದ ಮತ್ತು ಹೃದಯಗುಹೆಯನ್ನು ಪ್ರವೇಶಿಸಿ, ಭೂತಗಳೊಂದಿಗೆ[೨] ಇರುವ ಚತುರ್ಮುಖನನ್ನು (ಪರಮಾತ್ಮನು) ನೋಡಿದನು;[೩] ಇದೇ ಅದು.

[[೧] ವ್ಯಷ್ಟಿಸೃಷ್ಟಿಗೆ ಮೊದಲು.
[೨] ದೇಹೇಂದ್ರಿಯಗಳಿಂದ ಕೂಡಿದ ಭೂತಗಳೊಂದಿಗೆ.
[೩] ಇವನೇ ಸಕಲಜಗತ್ತುಗಳ ಸೃಷ್ಟಿಕರ್ತೃ ಎಂದು ಅನುಗ್ರಹಿಸಿ.]

೭. ಅವನು ಪ್ರಾಣಗಳೊಂದಿಗೆ ಇರುವ ಅದಿತಿ,[೧] ಇಂದ್ರಿಯಗಳನ್ನು ಅವಲಂಬಿಸಿ ಭೋಗವನ್ನು ಪಡೆಯುತ್ತಾನೆ, ಹೃದಯಗುಹೆಯನ್ನು ಪ್ರವೇಶಿಸಿರುವನು (ಪೃಥಿವ್ಯಾದಿ) ಭೂತಗಳೊಂದಿಗೆ ನಾನಾರೂಪದಿಂದ[೨] ಹುಟ್ಟುತ್ತಾನೆ; ಇದೇ ಅದು.[೩]

[[೧] ಕರ್ಮಫಲವನ್ನು ತಿನ್ನುವುದರಿಂದ ಅದಿತಿ ಎಂದು ಹೆಸರು; ಎಂದರೆ ಜೀವ.
[೨] ದೇವಾದಿರೂಪಗಳಿಂದ.
[೩] ಈ ಜೀವಾತ್ಮನು ಆ ಪರಮಾತ್ಮನನ್ನೇ ಆತ್ಮನನ್ನಾಗಿ ಹೊಂದಿರುತ್ತಾನೆ.

೮. ಅಪ್ರಮತ್ತರೂ ಹವಿಷ್ಮಂತರೂ[೧] ಆದ ಮನುಷ್ಯರಿಂದ ಪ್ರತಿದಿನವೂ ಸ್ತುತ್ಯನಾದ ಜಾತವೇದನೆಂಬ ಅಗ್ನಿಯು, ಗರ್ಭಿಣಿಯರಿಂದ ಗರ್ಭವು ಹೇಗೆ ಧರಿಸಲ್ಪಟ್ಟಿರುವುದೊ ಹಾಗೆ, ಎರಡು ಅರಣಿಗಳಲ್ಲಿಯೂ ಇಡಲ್ಪಟ್ಟಿರುತ್ತಾನೆ. ಇದೇ ಅದು.[೨]

[[೧] ತುಪ್ಪವೇ ಮೊದಲಾದುವುಗಳನ್ನು ಹೋಮಮಾಡುವ ಋತ್ವಿಕ್ಕುಗಳು.
[೨] ಈ ಅಗ್ನಿಯು ಪೂರ್ವೋಕ್ತವಾದ ಬ್ರಹ್ಮನನ್ನು ಆತ್ಮನನ್ನಾಗಿ ಹೊಂದಿದೆ.]

೯. ಯಾವನಿಂದ[೧] ಸೂರ್ಯನು ಉದಯಿಸುತ್ತಾನೆಯೊ ಮತ್ತು ಯಾವನಲ್ಲಿ ಅಸ್ತಮಿಸುತ್ತಾನೆಯೊ ಅವನನ್ನು ಎಲ್ಲ ದೇವತೆಗಳು ಪ್ರವೇಶಿಸಿರುವರು;[೨] ಅವನನ್ನು ಯಾವನೂ ಮೀರಲಾರನು. ಇದೇ ಅದು.

[[೧] ಬ್ರಹ್ಮನಿಂದ.
[೨] ಅವನಲ್ಲಿ ಎಲ್ಲ ದೇವತೆಗಳು ಪ್ರತಿಷ್ಠಿತರಾಗಿರುವರು.]

೧೦. ಯಾವುದು[೧] ಇಲ್ಲಿರುವುದೊ[೨] ಅದೇ ಅಲ್ಲಿರುವುದು;[೩] ಯಾವುದು ಅಲ್ಲಿರುವುದೊ ಅದೇ ಇಲ್ಲಿಯೂ ಇರುವುದು. ಯಾವನು ಇಲ್ಲಿ[೪] ಭೇದವಾಗಿರುವಂತೆ ನೋಡುತ್ತಾನೆಯೊ ಅವನು ಮೃತ್ಯುವಿನಿಂದ ಮೃತ್ಯುವಿಗೆ ಹೋಗುತ್ತಾನೆ.[೫]

[ಪರಮಾತ್ಮನಿಗೆ ಸರ್ವಾತ್ಮತ್ವವು ಉಂಟಾಗುವುದಿಲ್ಲವೆಂಬ ಸಂಶಯಕ್ಕೆ ಈ ಮಂತ್ರವು ಉತ್ತರವನ್ನು ಕೊಟ್ಟಿದೆ.
[೧] ಪರಮಾರ್ಥತತ್ತ್ವವು.
[೨] 'ನಾನು' ಎಂಬ ಅನುಭವವನ್ನು ಹೊಂದುವ ಈ ಲೋಕ.
[೩] ಅದೇ ಲೋಕಾಂತರಗಳಲ್ಲಿಯೂ ಆತ್ಮಭೂತವಾಗಿರುವುದು. ಆದುದರಿಂದ ಪರಮಾತ್ಮನಲ್ಲಿ ಯಾವ ಭೇದವೂ ಇರುವುದಿಲ್ಲ.
[೪] ಪರಮಾತ್ಮನಲ್ಲಿ.
[೫] ಸಂಸಾರದಿಂದ ಸಂಸಾರಕ್ಕೆ ಹೋಗುತ್ತಾನೆ.]

೧೧. ಇದನ್ನು[೧] ಮನಸ್ಸಿನಿಂದಲೇ[೨] ಹೊಂದಬೇಕು; ಇಲ್ಲಿ ಯಾವ ಭೇದವೂ ಇಲ್ಲ. ಯಾವನು ಇಲ್ಲಿ ಭೇದವಾಗಿರುವಂತೆ ನೋಡುತ್ತಾನೆಯೊ ಅವನು ಮೃತ್ಯುವಿನಿಂದ ಮೃತ್ಯುವಿಗೆ ಹೋಗುತ್ತಾನೆ.

[ಸರ್ವಾತ್ಮಭೂತವಾದ ಪರಮಾತ್ಮ ತತ್ತ್ವವು ನಮಗೆ ಹೇಗೆ ಲಭಿಸುವುದು ಎಂಬುದಕ್ಕೆ ಯಮನು ಉತ್ತರವನ್ನು ಕೊಡುತ್ತಾನೆ.

[1] ಆತ್ಮಸ್ವರೂಪವನ್ನು.

[2] ಶುದ್ಧವಾದ ಮನಸ್ಸಿನಿಂದಲೇ.]

**೧೨.** ಅಂಗುಷ್ಠಪರಿಮಾಣವುಳ್ಳ ಪುರುಷನು ಶರೀರದ ಮಧ್ಯದಲ್ಲಿ ಇರುತ್ತಾನೆ. (ಅವನು) ಭೂತಭವಿಷ್ಯಗಳಿಗೆ ಒಡೆಯನು.[1] ಆದುದರಿಂದ[2] ಅವನು ನಿಂದಿಸುವುದಿಲ್ಲ. ಇದೇ ಅದು.

[[1] ಕಾಲತ್ರಯದಲ್ಲಿಯೂ ನಿಖಿಲಚೇತನಾಚೇತನಗಳಿಗೆ ಈಶ್ವರನು.

[2] ಭೂತಭವಿಷ್ಯಗಳ ಈಶ್ವರನಾಗಿರುವುದರಿಂದಲೂ ಮತ್ತು ವಾತ್ಸಲ್ಯಾತಿಶಯದಿಂದಲೂ ದೇಹಗತವಾದ ದೋಷಗಳನ್ನೂ ಕೂಡ ಭೋಗ್ಯವೆಂದು ತಿಳಿದುಕೊಳ್ಳುತ್ತಾನೆ.]

**೧೩.** ಅಂಗುಷ್ಠಪರಿಮಾಣವುಳ್ಳ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ. (ಅವನು) ಭೂತಭವಿಷ್ಯಗಳಿಗೆ ಒಡೆಯನು; ಇಂದು ಇರುವವನೂ ಅವನೇ, ನಾಳೆಯೂ ಅವನೇ.[1] ಇದೇ ಅದು.

[[1] ಇಂದಿನ ಪದಾರ್ಥಸಮೂಹವೂ ನಾಳೆಯ ಪದಾರ್ಥಸಮೂಹವೂ, ಕಾಲತ್ರಯದಲ್ಲಿರುವ ಪದಾರ್ಥಸಮೂಹವೂ ಪರಮಾತ್ಮನನ್ನೇ ಆತ್ಮನನ್ನಾಗಿ ಹೊಂದಿವೆ.]

**೧೪.** ಪರ್ವತಶಿಖರದ ಮೇಲೆ ಸುರಿದ (ಮಳೆಯ) ನೀರು ತಗ್ಗಾದ ಪ್ರದೇಶಗಳಲ್ಲಿ ಹರಿದುಹೋಗುವಂತೆ ಧರ್ಮಗಳನ್ನು[1] ಭಿನ್ನವಾಗಿ ನೋಡುವವನು ಅವುಗಳನ್ನೇ ಅನುಸರಿಸುತ್ತಾನೆ.

[[1] ದೇವತೆಗಳ ಮತ್ತು ಮನುಷ್ಯರ ಅಂತರ್ಯಾಮಿತ್ವವೇ ಮೊದಲಾದ ಪರಮಾತ್ಮನ ಧರ್ಮಗಳನ್ನು ಇತರ ಅಧಿಕರಣಗಳಲ್ಲಿ ನೋಡುವವನು ಪರ್ವತಗಳ ಝರಿಗಳಂತೆ ಸಂಸಾರಕೂಪದಲ್ಲಿ ಬೀಳುತ್ತಾನೆ.]

**೧೫.** ಹೇ ಗೌತಮ, ಶುದ್ಧವಾದ ನೀರಿನಲ್ಲಿ ಹಾಕಿದ ಶುದ್ಧವಾದ ನೀರಿನಂತೆ ಮನನಶೀಲನಾದ ಮುನಿಯ ಆತ್ಮವೂ ಆಗುವುದು.[1]

[ಸರ್ವತ್ರ ಏಕಾತ್ಮತ್ವಜ್ಞಾನದಿಂದ ಉಂಟಾಗುವ ಫಲವನ್ನು ಹೇಳಿದೆ.

[1] ಪರಮಾತ್ಮಜ್ಞಾನದಿಂದ ವಿಶುದ್ಧನಾಗಿ ವಿಶುದ್ಧನಾದ ಪರಮಾತ್ಮನೊಂದಿಗೆ ಸಮಾನನಾಗುತ್ತಾನೆ.]

## ಐದನೆಯ ವಲ್ಲೀ

೧. ಜನ್ಮಾದಿವಿಕ್ರಿಯಾರಹಿತನೂ ಋಜುಬುದ್ಧಿಯುಳ್ಳವನೂ ಆದ (ಆತ್ಮನಿಗೆ) ಹನ್ನೊಂದು ದ್ವಾರಗಳಿರುವ ಪುರವುಂಟು.[೧] ಇದನ್ನು ತಿಳಿದು ಕೊಂಡು ಶೋಕಿಸುವುದಿಲ್ಲ, (ರಾಗದ್ವೇಷಾದಿಗಳಿಂದ) ಮುಕ್ತನಾಗಿ (ಪ್ರಕೃತಿ ಸಂಬಂಧದಿಂದ) ಮುಕ್ತನಾಗುತ್ತಾನೆ. ಇದೇ ಅದು.[೨]

[೧] ಪುರಕ್ಕೆ ಒಡೆಯನಾದವನು ಹೇಗೆ ಭಿನ್ನನೊ ಹಾಗೆಯೇ ಶರೀರವೆಂಬ ಪುರವೂ ಕೂಡ ತನ್ನ ಆತ್ಮನಿಗಿಂತ ಭಿನ್ನವಾಗಿದೆ. ಅವಿವೇಕಿಗೆ ದೇಹವೇ ಆತ್ಮ ಎಂಬ ಭ್ರಮೆಯುಂಟಾಗುತ್ತದೆ.

[೨] ಈ ಮಂತ್ರದಲ್ಲಿ ಪ್ರತಿಪಾದ್ಯವಾದ ಮುಕ್ತನ ಸ್ವರೂಪವು ಪರಮಾತ್ಮನನ್ನೇ ಆತ್ಮನನ್ನಾಗಿ ಹೊಂದಿದೆ ಎಂದು ಭಾವ.]

೨. ತೇಜಸ್ವಿಯಾದ ಸೂರ್ಯ, ಅಂತರಿಕ್ಷದಲ್ಲಿರುವ ವಾಯುವು, ವೇದಿಯಲ್ಲಿರುವ ಅಗ್ನಿ ಅಥವಾ ಋತ್ವಿಕ್, ಮನೆಗೆ ಬಂದ ಅತಿಥಿ, ಮನುಷ್ಯನಲ್ಲಿ ಆತ್ಮನಾಗಿರುವವನು, ದೇವತೆಗಳಲ್ಲಿರುವವನು, ಸತ್ಯಲೋಕದಲ್ಲಿರುವವನು, ಪರಮಪದದಲ್ಲಿರುವ ಜೀವಾತ್ಮ, ನೀರಿನಲ್ಲಿಯೂ ಭೂಮಿಯಲ್ಲಿಯೂ ಹುಟ್ಟಿದವುಗಳು, ಕರ್ಮಫಲವಾದ ಸ್ವರ್ಗಾದಿಗಳು, ಪರ್ವತಗಳಿಂದ ಹುಟ್ಟಿದವುಗಳು—(ಇವೆಲ್ಲವೂ) ಬೃಹತ್ ಸತ್ಯ.[೧]

[ಈ ಮಂತ್ರದಲ್ಲಿ ಬ್ರಹ್ಮನ ಸರ್ವಾತ್ಮತ್ವವನ್ನು ದೃಢೀಕರಿಸಿದೆ.

[೧] ಇವೆಲ್ಲವೂ ಅಪರಿಚ್ಛಿನ್ನಸತ್ಯರೂಪವಾದ ಬ್ರಹ್ಮವನ್ನೇ ಆತ್ಮನನ್ನಾಗಿ ಹೊಂದಿವೆ.]

೩. (ಎಲ್ಲರ ಹೃದಯದಲ್ಲಿರುವ ಪರಮಾತ್ಮನು) ಪ್ರಾಣವನ್ನು ಮೇಲಕ್ಕೆ ಎತ್ತುತ್ತಾನೆ, ಅಪಾನವಾಯುವನ್ನು ಕೆಳಕ್ಕೆ ತಳ್ಳುತ್ತಾನೆ; (ಹೃತ್ಪುಂಡರೀಕದ) ಮಧ್ಯದಲ್ಲಿ ಕುಳಿತಿರುವ ವಾಮನನನ್ನು[೧] ವಿಶ್ವೇದೇವತೆಗಳು[೨] ಉಪಾಸಿಸುತ್ತಾರೆ.

[[೧] ವರೇಣ್ಯನೂ ಭಜಿಸಲ್ಪಡಲು ಅರ್ಹನೂ ಆದ ಅವನನ್ನು ಅಥವಾ ಹೃದಯ ಪುಂಡರೀಕದ ಪರಿಮಿತಿಯಿಂದ ಹ್ರಸ್ವಪರಿಮಾಣವುಳ್ಳವನನ್ನು.

[೨] ಸತ್ತ್ವಗುಣವುಳ್ಳವರು.]

೪. ದೃಢಶರೀರದಲ್ಲಿರಲಿ, ಶಿಥಿಲವಾದ ಶರೀರದಲ್ಲಿರಲಿ ಅಥವಾ ಶರೀರವನ್ನು ಬಿಡುತ್ತಿರಲಿ, (ಉಪಾಸಕನಾದ) ದೇಹಿಗೆ ಇಲ್ಲಿ ಏನು ಉಳಿಯುತ್ತದೆ?[೧] ಇದೇ ಅದು.

['ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ' ಎಂದು ಛಾಂದೋಗ್ಯೋಪನಿಷತ್ತು (೬, ೧೪, ೨) ಹೇಳಿರುವಂತೆ ಪರಮಾತ್ಮನನ್ನು ಉಪಾಸಿಸುವವನಿಗೆ ಶರೀರಪಾತವೆಂಬ ಅಂತರಾಯವನ್ನು ಬಿಟ್ಟರೆ ಇನ್ನು ಏನೂ ಉಳಿದಿಲ್ಲವೆಂದು ಯಮನು ಹೇಳುತ್ತಾನೆ.

[೧] ಕೃತಕೃತ್ಯನಾಗಿರುವುದರಿಂದ ಅವನು ಮಾಡುವುದೇನೂ ಇರುವುದಿಲ್ಲ.]

೫. ಯಾವ ಮನುಷ್ಯನೂ ಪ್ರಾಣದಿಂದಾಗಲಿ ಅಪಾನದಿಂದಾಗಲಿ ಜೀವಿಸುವುದಿಲ್ಲ. ಯಾವನಲ್ಲಿ ಇವೆರಡೂ ಆಶ್ರಯಿಸಿಕೊಂಡಿರುವುವೊ ಅಂಥ ಇನ್ನೊಬ್ಬನಿಂದ ಜೀವಿಸುತ್ತಾರೆ.

[ಸರ್ವಪ್ರಾಣಿಗಳ ಪ್ರಾಣನಕ್ಕೆ ಕಾರಣವಾದ ಬ್ರಹ್ಮನ ಮಹಿಮೆಯನ್ನು ಈ ಮಂತ್ರದಲ್ಲಿ ಹೇಳಿದೆ.]

೬. ಹೇ ನಚಿಕೇತ, ಈಗ ಈ ರಹಸ್ಯವೂ ಸನಾತನವೂ ಆದ ಬ್ರಹ್ಮವನ್ನೂ, ಮೃತ್ಯುವನ್ನು ಹೊಂದಿದ ಮೇಲೆ ಆತ್ಮನು ಹೇಗೆ ಆಗುವನೆಂಬುದನ್ನೂ ಹೇಳುತ್ತೇನೆ.

೭. (ಯಜ್ಞವೇ ಮೊದಲಾದ) ಕರ್ಮಕ್ಕೆ ಅನುಸಾರವಾಗಿಯೂ[೧] ಉಪಾಸನೆಗೆ ಅನುಸಾರವಾಗಿಯೂ, ಕೆಲವರು ದೇಹಿಗಳು ಶರೀರಗ್ರಹಣಕ್ಕಾಗಿ ಯೋನಿಯನ್ನೂ, ಇನ್ನು ಕೆಲವರು ಸ್ಥಾವರಭಾವವನ್ನೂ ಹೊಂದುತ್ತಾರೆ.

[[೧] 'ರಮಣೀಯಚರಣಾಃ' (ಛಾ. ಉ. ೫, ೧೦, ೭) ಮತ್ತು 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ' (ಬೃ. ಉ. ೪, ೪, ೨) ಎಂದು ಶ್ರುತಿಗಳು ಹೇಳಿರುವಂತೆ.]

೮. (ಜೀವಾತ್ಮರು) ನಿದ್ರಿಸುತ್ತಿರುವಾಗ, ಸಂಕಲ್ಪಿಸಿ ಸಂಕಲ್ಪಿಸಿ (ಅವರ ಸ್ವಪ್ನಗಳಲ್ಲಿ ವಿಷಯಗಳನ್ನು) ನಿರ್ಮಿಸುತ್ತ ಯಾವ ಈ ಪುರುಷನು ಎಚ್ಚತ್ತಿರುವನೊ ಅವನೇ ಬ್ರಹ್ಮ, ಅವನೇ ಅಮೃತನು[೧] ಎಂದು ಹೇಳಲ್ಪಟ್ಟಿದ್ದಾನೆ. ಅವನಲ್ಲಿ ಎಲ್ಲ ಲೋಕಗಳೂ ಆಶ್ರಯವನ್ನು ಹೊಂದಿವೆ. ಅವನನ್ನು ಯಾವನೂ ಮೀರಲಾರನು. ಇದೇ ಅದು.

[೧ ನಿತ್ಯಮುಕ್ತರು ಅಮೃತಸ್ವರೂಪರಾದರೂ ಅವರ ಅಮೃತತ್ವವು ಪರಮಾತ್ಮನ ಕೃಪೆಯನ್ನು ಅವಲಂಬಿಸಿರುವುದರಿಂದ ಪರಮಾತ್ಮನೇ ಅಮೃತನು ಎಂದು ಹೇಳಿದೆ.]

೯. ಹೇಗೆ ಒಂದೇ ಅಗ್ನಿಯು[1] ಈ ಲೋಕವನ್ನು ಪ್ರವೇಶಿಸಿ ಎಲ್ಲ ರೂಪಗಳಿಗೂ ಪ್ರತಿರೂಪವಾಗಿರುವುದೊ[2] ಹಾಗೆಯೇ ಸರ್ವಭೂತಗಳ ಒಬ್ಬನೇ ಆತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು[3] ಮತ್ತು ಹೊರಗೂ[4] ಇರುವನು.

[ಒಬ್ಬನೇ ಆತ್ಮನು ಎಲ್ಲರಲ್ಲಿಯೂ 'ಅಹಂ' ಆಗಿರುವನು ಎಂಬುದು ತಿಳಿಯಲು ಕಷ್ಟವಾದುದರಿಂದ ಅದನ್ನು ದೃಢೀಕರಿಸಲು ಯಮನು ಪುನಃ ಉಪದೇಶಿಸುತ್ತಾನೆ.

೧ ತೇಜಸ್ಸುಳ್ಳ ಒಂದೇ ಧಾತುವು ತ್ರಿವೃತ್ಕರಣದ ಮೂಲಕ ಎಲ್ಲವನ್ನೂ ವ್ಯಾಪಿಸಿ ಲೋಕಗಳನ್ನು ಪ್ರವೇಶಿಸಿರುವಂತೆ.

೨ ಎಲ್ಲ ಭೌತಿಕವಸ್ತುಗಳಲ್ಲಿಯೂ ತನ್ನ ರೂಪವನ್ನು ಬಿಟ್ಟಿದೆ; ಎಂದರೆ ತೇಜೋಧಾತುವು ಎಲ್ಲ ಭೌತಿಕಪದಾರ್ಥಗಳಲ್ಲಿಯೂ ಸೇರಿ ಎಲ್ಲ ರೂಪಗಳನ್ನು ಹೊಂದಿರುವುದರಿಂದ ಪ್ರತಿರೂಪವಾಗಿದೆ.

೩ ಪರಮಾತ್ಮನು ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಎಲ್ಲ ರೂಪಗಳನ್ನು ಹೊಂದಿರುವನು.

೪ ಹೊರಗಡೆಯೂ ವ್ಯಾಪಿಸಿರುತ್ತಾನೆ.]

೧೦. ಹೇಗೆ ಒಂದೇ ವಾಯುವು ಈ ಲೋಕವನ್ನು ಪ್ರವೇಶಿಸಿ ಎಲ್ಲ ರೂಪಗಳಲ್ಲಿ ಪ್ರತಿರೂಪವಾಗಿರುವುದೊ ಹಾಗೆಯೇ ಸರ್ವಭೂತಗಳ ಒಬ್ಬನೇ ಆತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು ಮತ್ತು ಹೊರಗೂ ಇರುವನು.

೧೧. ಸೂರ್ಯನು[1] ಹೇಗೆ ಸರ್ವಲೋಕದ ಕಣ್ಣಾಗಿದ್ದರೂ ಕಣ್ಣಿಗೆ ಸಂಬಂಧಪಟ್ಟ ಬಾಹ್ಯದೋಷಗಳಿಂದ ಲಿಪ್ತನಾಗುವುದಿಲ್ಲವೊ ಹಾಗೆಯೇ ಅದ್ವಿತೀಯನಾದ (ಪರಮಾತ್ಮನು) ಸರ್ವಪ್ರಾಣಿಗಳ ಅಂತರಾತ್ಮನಾಗಿದ್ದರೂ ಲೋಕದ ದುಃಖದಿಂದ ಲಿಪ್ತನಾಗುವುದಿಲ್ಲ.[2] (ಏಕೆಂದರೆ ಅವನು) ಹೊರಗೆ ಇರುತ್ತಾನೆ.

[ಜೀವಾತ್ಮನಿಗೂ ಪರಮಾತ್ಮನಿಗೂ ಆತ್ಮತ್ವವು ಸಮಾನವಾಗಿದ್ದರೂ ಜೀವಾತ್ಮನ ದೋಷಗಳು ಪರಮಾತ್ಮನನ್ನು ಸೋಂಕುವುದಿಲ್ಲವೆಂದು ದೃಷ್ಟಾಂತದ ಮೂಲಕ ಹೇಳಿದೆ.

[1] 'ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ', 'ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್' ಎಂದು ಶ್ರುತಿಗಳು ಹೇಳಿರುವಂತೆ ಸೂರ್ಯನು ಹೇಗೆ ಕಣ್ಣುಗಳ ಅಧಿಷ್ಠಾನ ದೇವತೆಯಾಗಿ ಕಣ್ಣಿನ ಮಾಲಿನ್ಯಾದಿ ದೋಷಗಳಿಂದ ಸೋಂಕಲ್ಪಡುವುದಿಲ್ಲವೊ.

[2] ಸ್ವಾಭಾವಿಕವಾದ ಅಪಹತಪಾಪ್ಮತ್ವವೇ ಮೊದಲಾದ ಗುಣಗಳಿಂದ ಕೂಡಿ ಇತರ ಸಮಸ್ತವಸ್ತುಗಳಿಗೆ ಬಾಹ್ಯನಾಗಿ ಎಂದರೆ ವಿಲಕ್ಷಣನಾಗಿರುವುದರಿಂದ.]

೧೨. ಏಕನೂ[1] ವಶಿಯೂ[2] ಸರ್ವಪ್ರಾಣಿಗಳ ಅಂತರಾತ್ಮನೂ ಒಂದೇ ಬೀಜವನ್ನು[3] ಬಹುವಿಧವಾಗಿ[4] ಮಾಡುವವನೂ ಆದ ಅವನನ್ನು ಆತ್ಮದಲ್ಲಿರುವವನನ್ನಾಗಿ[5] ಯಾವ ವಿವೇಕಿಗಳು ನೋಡುತ್ತಾರೆಯೊ ಅವರಿಗೆ ಶಾಶ್ವತವಾದ ಸುಖವು, ಇತರರಿಗಲ್ಲ.

[[1] ಸಮನೂ ಅಧಿಕನೂ ಇಲ್ಲದವನು.

[2] ಸಂಕಲ್ಪವುಳ್ಳವನು; ಅಥವಾ 'ಜಗದ್ವಶೇ ವರ್ತತೇ' ಎಂದು ಹೇಳಿರುವ ಹಾಗೆ ಯಾವನ ವಶದಲ್ಲಿ ಪ್ರಪಂಚವು ಇರುತ್ತದೆಯೊ ಅವನು.

[3] ಕೆಲವು ಪಾಠಗಳಲ್ಲಿ 'ರೂಪ' ಎಂದಿದೆ. 'ತಮಃಪರೇ ದೇವ ಏಕೀಭವತಿ' ಎಂದು ಶ್ರುತಿಯು (ಪ್ರ.ಉ. ೪, ೧) ಹೇಳಿರುವಂತೆ ತನ್ನೊಂದಿಗೆ ನಾಮರೂಪವಿಭಾಗ ಗಳಿಲ್ಲದೆ ಏಕೀಭೂತವೂ ತಮೋರೂಪವೂ ಆದ ಬೀಜವನ್ನು.

[4] ಮಹತ್ತೇ ಮೊದಲಾದ ಬಹುವಿಧರೂಪಗಳಿಂದ.

[5] 'ಯ ಆತ್ಮನಿ ತಿಷ್ಠನ್' ಎಂದು ಶ್ರುತಿಯು (ಬೃ. ಉ. ಮಾಧ್ಯಂದಿನ ಪಾಠ) ಹೇಳಿರುವಂತೆ ಅಂತರ್ಯಾಮಿಯಾಗಿರುವವನನ್ನು.]

೧೩. ಯಾವ ಏಕನೂ ನಿತ್ಯನೂ ಆದ ಚೇತನನು, ಅನೇಕ ನಿತ್ಯ ಚೇತನರ[1] ಇಷ್ಟಾರ್ಥಗಳನ್ನು ಕೊಡುತ್ತಾನೆಯೊ, ಅವನನ್ನು ಆತ್ಮದಲ್ಲಿರುವವ ನನ್ನಾಗಿ ಯಾವ ವಿವೇಕಿಗಳು ನೋಡುತ್ತಾರೆಯೊ ಅವರಿಗೆ ಶಾಶ್ವತವಾದ ಶಾಂತಿಯು; ಇತರರಿಗಲ್ಲ.

[[1] ಇತರ ಪಾಠಗಳಲ್ಲಿ 'ಅನಿತ್ಯಾನಾಂ' ಎಂದು ಹೇಳಿದೆ.]

೧೪. (ನಚಿಕೇತ): ನಿರ್ದೇಶಿಸಲು[1] ಅರ್ಹವಾದ ಆ ಪರಮಸುಖ ವನ್ನು[2] 'ಇದು'[3] ಎಂದು (ಯೋಗಿಗಳು) ತಿಳಿಯುತ್ತಾರೆ. ಅದನ್ನು ಹೇಗೆ ತಿಳಿದುಕೊಳ್ಳಲಿ?[4] ಅದು ಪ್ರಕಾಶಿಸುವುದೊ,[5] (ಅದರಲ್ಲೂ) ಅದು ಚೆನ್ನಾಗಿ ಪ್ರಕಾಶಿಸುವುದೊ ಅಥವಾ ಪ್ರಕಾಶಿಸುವುದಿಲ್ಲವೊ?[6]

[[1] 'ಅನಿರ್ದೇಶ್ಯಂ' ಎಂದು ಪಾಠಾಂತರವುಂಟು.

[2] ಆನಂದರೂಪನಾದ ಪರಮಾತ್ಮನನ್ನೇ ಬ್ರಹ್ಮ ಎಂದು.

[3] ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಪ್ರತ್ಯಕ್ಷವಾಗಿ.

[4] ಗ್ರಹಿಸಲು ಅಸಮರ್ಥನಾದ ನಾನು ರೂಪಾದಿರಹಿತವಾದ ಬ್ರಹ್ಮವನ್ನು ಹೇಗೆ ತಿಳಿದುಕೊಳ್ಳಲಿ.

[5] ದೀಪ್ತಿಯಿಂದ ಕೂಡಿ.

[6] ಇತರ ತೇಜಸ್ಸುಗಳಿಂದ ಕೂಡಿ ಚೆನ್ನಾಗಿ ಪ್ರಕಾಶಿಸುವುದಿಲ್ಲವೊ.]

೧೫. (ಯಮ): ಅಲ್ಲಿ ಸೂರ್ಯನಾಗಲಿ ಚಂದ್ರನಾಗಲಿ ನಕ್ಷತ್ರಗಳಾಗಲಿ ಮಿಂಚುಗಳಾಗಲಿ ಪ್ರಕಾಶಿಸುವುದಿಲ್ಲ; ಈ ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುದು; ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು.

['ಆದಿತ್ಯವರ್ಣಂ ತಮಸಃ ಪರಸ್ತಾತ್', 'ಸದೇಕರೂಪರೂಪಾಯ' ಎಂದು ಹೇಳಿರುವಂತೆ ಯೋಗಿಗಳ ಅವಲಂಬನೆಗಾಗಿ ಪರಮಾತ್ಮನ ದಿವ್ಯಮಂಗಳವಿಗ್ರಹವುಂಟು. ಆ ವಿಗ್ರಹದಿಂದ ಕೂಡಿದ ಪರಮಾತ್ಮನು ತನ್ನ ದೀಪ್ತಿಯಿಂದ ಎಲ್ಲವನ್ನು ಮೀರುತ್ತ ಪ್ರಕಾಶಿಸುತ್ತಾನೆ.]

## ಆರನೆಯ ವಲ್ಲೀ

೧. ಈ ಸನಾತನವಾದ ಅಶ್ವತ್ಥವೃಕ್ಷವು ಮೇಲೆ[೧] ಬುಡವನ್ನೂ ಕೆಳಗೆ[೨] ಶಾಖೆಗಳನ್ನೂ ಹೊಂದಿದೆ. ಅದೇ ಶುಕ್ರವಾದುದು, ಅದೇ ಬ್ರಹ್ಮ; ಅದೇ ಅಮೃತ ಎಂದು ಹೇಳಲ್ಪಡುತ್ತದೆ; ಎಲ್ಲ ಲೋಕಗಳು ಅದರಲ್ಲಿ ಆಶ್ರಯವನ್ನು ಹೊಂದಿವೆ. ಅದನ್ನು ಯಾವನೂ ಮೀರಲಾರನು. ಇದೇ ಅದು.

[ಬ್ರಹ್ಮವು ಅಶ್ವತ್ಥವೆಂಬ ಸಂಸಾರವೃಕ್ಷಕ್ಕಿಂತ ಭಿನ್ನವು ಎಂದು ಯಮನು ಹೇಳುತ್ತಾನೆ.

[೧] ಸಪ್ತಲೋಕಗಳ ಮೇಲಿರುವ ಚತುರ್ಮುಖಬ್ರಹ್ಮನಿಂದ ಪ್ರಾರಂಭವಾಗುವುದರಿಂದ.

[೨] ಪೃಥಿವಿಯಲ್ಲಿರುವ ನರಪಶುಮೃಗಕ್ರಿಮಿಕೀಟಗಳಲ್ಲಿ ಕೊನೆಯಾಗುವುದರಿಂದ.]

೨. ಪ್ರಾಣದಲ್ಲಿರುವ[೧] ಮತ್ತು ಅದರಿಂದ ಹೊರಕ್ಕೆ ಬಂದಿರುವ ಈ ಜಗತ್ತೆಲ್ಲವೂ ಎತ್ತಿದ ವಜ್ರಾಯುಧದಿಂದ[೨] ಉಂಟಾದ ಮಹದ್ಭಯದಿಂದ ಕಂಪಿಸುತ್ತದೆ. ಯಾರು ಇದನ್ನು ತಿಳಿದುಕೊಳ್ಳುವರೊ ಅವರು ಅಮೃತರಾಗುವರು.

[[೧] ಬ್ರಹ್ಮದಲ್ಲಿರುವ.

[೨] ಭಯಕ್ಕೆ ಕಾರಣಭೂತವಾದ ಪ್ರಾಣಶಬ್ದದಿಂದ ಹೇಳಲ್ಪಟ್ಟ ಪರಬ್ರಹ್ಮನನ್ನು ಸೂಚಿಸುತ್ತದೆ. 'ಮಹದ್ಭಯಂ ವಜ್ರಮುದ್ಯತಂ' ಎಂಬ ಪ್ರಥಮಾಂತ ಪದಗಳು ಪಂಚಮ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ.]

೩. ಇವನ ಭಯದಿಂದ ಅಗ್ನಿಯು ಸುಡುತ್ತಾನೆ, ಸೂರ್ಯನು ಪ್ರಕಾಶಿಸುತ್ತಾನೆ, ಇಂದ್ರನು ಮತ್ತು ವಾಯುವು (ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ); ಐದನೆಯವನಾದ ಯಮನೂ (ಸಹ) ಓಡುತ್ತಾನೆ.

೪. ಶರೀರಪಾತಕ್ಕೆ ಮೊದಲು ಇಲ್ಲಿಯೇ (ಬ್ರಹ್ಮವನ್ನು) ತಿಳಿದುಕೊಳ್ಳಲು ಶಕ್ತನಾಗದಿದ್ದರೆ, ಅನಂತರ ಸೃಷ್ಟಿಯಾಗಿರುವ ಲೋಕಗಳಲ್ಲಿ ಶರೀರವನ್ನು ಹೊಂದಲು ಸಮರ್ಥನಾಗುತ್ತಾನೆ.

[ಶರೀರಪಾತಕ್ಕೆ ಮೊದಲೇ ಆತ್ಮಜ್ಞಾನಕ್ಕಾಗಿ ಪ್ರಯತ್ನಿಸಬೇಕು ಎಂದರ್ಥ.]

**೫.** ಅಮಾವಾಸ್ಯೆಯಲ್ಲಿ ಹೇಗೊ ಆತ್ಮದಲ್ಲಿ ಹಾಗೆ;[೧] ಸ್ವಪ್ನದಲ್ಲಿ ಹೇಗೊ ಪಿತೃಲೋಕದಲ್ಲಿ ಹಾಗೆ;[೨] ನೀರಿನಲ್ಲಿ ಸುತ್ತಲೂ ಹೇಗೆ ಕಾಣುವುದೊ ಹಾಗೆ ಗಂಧರ್ವಲೋಕದಲ್ಲಿ;[೩] ನೆರಳುಬಿಸಿಲುಗಳಲ್ಲಿ ಹೇಗೊ ಬ್ರಹ್ಮಲೋಕದಲ್ಲಿ ಹಾಗೆ.[೪]

[ಪರಮಾತ್ಮನನ್ನು ತಿಳಿದುಕೊಳ್ಳುವುದು ಕಷ್ಟ ಎಂದು ಯಮನು ಹೇಳುತ್ತಾನೆ.

[೧] ಬೆಳದಿಂಗಳಿಲ್ಲದ ಅಮಾವಾಸ್ಯೆಯಲ್ಲಿ ವಸ್ತುಗಳು ಹೇಗೆ ಸ್ಪಷ್ಟವಾಗಿ ಕಾಣುವುದಿಲ್ಲವೊ ಹಾಗೆಯೇ ಈ ಲೋಕದಲ್ಲಿ ಆತ್ಮವಿಷಯಕವಾದ ಜ್ಞಾನವು ಸ್ಪಷ್ಟವಾಗಿರುವುದಿಲ್ಲ; ಅಥವಾ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವು ಸಾಕ್ಷಾತ್ತಾಗಿ ಕಂಡ ವಸ್ತುವಿನಂತೆ ಹೇಗೆ ಸರಿಯಾಗಿ ಕಾಣುವುದಿಲ್ಲವೊ ಹಾಗೆಯೇ ಆತ್ಮವಿಷಯಕವಾದ ಪ್ರತೀತಿಯು ಈ ಲೋಕದಲ್ಲಿ ಉಂಟಾಗುವುದಿಲ್ಲ.

[೨] ಜಾಗ್ರದವಸ್ಥೆಯಲ್ಲಿ ಉಂಟಾಗುವ ಅನುಭವದಂತೆ ಸ್ವಪ್ನದಲ್ಲಿ ತೋರುವ ದೃಶ್ಯಗಳನ್ನು ಸಂಶಯಾದಿಗಳಿಲ್ಲದೆ ಪರಿಶೀಲಿಸಲು ಹೇಗೆ ಅಶಕ್ಯವೊ ಹಾಗೆಯೇ ಪಿತೃಲೋಕದಲ್ಲಿ ಆತ್ಮವಿಷಯಕ ಜ್ಞಾನವು ಕಷ್ಟವು.

[೩] ನೀರಿನಲ್ಲಿರುವ ವಸ್ತುವು ಹೊರಗಿರುವ ವಸ್ತುವಿನಂತೆ ಸ್ಪಷ್ಟವಾಗಿ ಕಾಣುವುದಿಲ್ಲ; ಎಂದರೆ ನೀರಿನಲ್ಲಿ ವಸ್ತುವು ಸರ್ವತೋಮುಖವಾಗಿ ತೋರಿದಂತಾದರೂ ಅಲ್ಲಿ ಕಾಣುವುದು ಏಕದೇಶ ಮಾತ್ರ, ಹಾಗೆಯೇ ಗಂಧರ್ವಲೋಕದಲ್ಲಿ.

[೪] ಶುದ್ಧವಾದ ಬಿಸಿಲಿನಲ್ಲಿ ವಸ್ತುವು ಸ್ಪಷ್ಟವಾಗಿ ಕಾಣುವಂತೆ ಮಿಶ್ರವಾದ ನೆರಳುಬಿಸಿಲುಗಳಲ್ಲಿ ಕಾಣುವುದಿಲ್ಲ; ಹಾಗೆಯೇ ಚತುರ್ಮುಖಬ್ರಹ್ಮನ ಲೋಕದಲ್ಲಿ ಆತ್ಮತತ್ತ್ವನನ್ನು ತಿಳಿದುಕೊಳ್ಳಲು ಕಷ್ಟ ಎಂದು ಅರ್ಥ; ಅಥವಾ ಬ್ರಹ್ಮಲೋಕದಲ್ಲಿರುವವರಿಗೆ ನೆರಳುಬಿಸಿಲುಗಳಂತೆ ಆತ್ಮಾನಾತ್ಮಗಳನ್ನು ವಿಂಗಡಿಸಲು ಸಾಧ್ಯವಾದರೂ ಪರಮಾತ್ಮತತ್ತ್ವವು ತಿಳಿದುಕೊಳ್ಳಲು ಸುಲಭವಲ್ಲ.]

**೬.** ಪೃಥಗ್ಭಾವ ಉತ್ಪತ್ತಿ ನಾಶ ಇವು, ಬೇರೆಯಾಗಿರುವ ಮತ್ತು ಉತ್ಪತ್ತಿಯಾಗುವ ಇಂದ್ರಿಯಗಳಿಗೆ ಸೇರಿದವುಗಳೆಂದು ವಿವೇಕಿಯು ತಿಳಿದುಕೊಂಡು ಶೋಕಿಸುವುದಿಲ್ಲ.

[ಪರಸ್ಪರವೈಲಕ್ಷಣ್ಯ ಉತ್ಪತ್ತಿ ನಾಶ ಇವು, ನಿತ್ಯವೂ ಜ್ಞಾನೈಕಾಕಾರವೂ ಆದ ಆತ್ಮನಲ್ಲಿ ಇಲ್ಲವೆಂದು ತಿಳಿದುಕೊಂಡು ಶೋಕಿಸುವುದಿಲ್ಲ.]

**೭-೮.** ಇಂದ್ರಿಯಗಳಿಗಿಂತ ಮನಸ್ಸು ಪ್ರಧಾನವಾದುದು, ಮನಸ್ಸಿಗಿಂತ ಬುದ್ಧಿಯು ಪ್ರಧಾನವಾದುದು, ಬುದ್ಧಿಗಿಂತ ಮಹತ್ ಎಂಬ ಆತ್ಮನು ಪ್ರಧಾನನು, ಮಹತ್ ಆತ್ಮನಿಗಿಂತ ಅವ್ಯಕ್ತವು ಉತ್ತಮವು; ವ್ಯಾಪಕನೂ

ಅಲಿಂಗನೂ[1] ಆದ ಪುರುಷನೇ ಅವ್ಯಕ್ತಕ್ಕಿಂತ ಪ್ರಧಾನನು;[2] ಅವನನ್ನು ಅರಿತು ಕೊಂಡು ಜೀವಿಯು ಮುಕ್ತನಾಗುತ್ತಾನೆ, ಅಮೃತತ್ವವನ್ನು ಹೊಂದುತ್ತಾನೆ.

[ದೇಹಕ್ಕಿಂತ ಪ್ರತ್ಯಗಾತ್ಮನು ಭಿನ್ನನು ಎಂಬುದನ್ನು ತಿಳಿದುಕೊಳ್ಳುವುದಕ್ಕೂ ಭಗವಚ್ಛರಣಾಗತಿಯೇ ಸಾಧನವೆಂದು ಹಿಂದೆ ಹೇಳಿದ ಜೀವಾತ್ಮನ ಶರಣವನ್ನೇ ಯಮನು ಉಪದೇಶಿಸುತ್ತಾನೆ.

[1] ಯಾವ ಪ್ರಮಾಣದಿಂದಲೂ ತಿಳಿದುಕೊಳ್ಳಲು ಸಾಧ್ಯವಾಗದವನು.

[2] ಸಾಧಕರ ಪ್ರಾರ್ಥನೆಗಳನ್ನು ಕೇಳಿ ಅವರ ವಶವಾಗುವುದರಲ್ಲಿ ಪರಮಾತ್ಮನ 'ಪರತ್ವ' ಉಂಟು. ಪರಮಾತ್ಮನ ವಶೀಕರಣವೆಂದರೆ ಜೀವಾತ್ಮನ ಶರಣಾಗತಿ.]

೯. ಇವನ ರೂಪವು[1] ದೃಗ್ಗೋಚರವಾಗುವುದಿಲ್ಲ; ಇವನನ್ನು ಯಾವನೂ ಕಣ್ಣಿನಿಂದ ನೋಡಲಾರನು. ಮನಸ್ಸಿನ ಮೂಲಕ ಭಕ್ತಿಯಿಂದಲೂ ಧೃತಿಯಿಂದಲೂ ಇವನನ್ನು ಹೊಂದಬಹುದು.[2] ಇವನನ್ನು ತಿಳಿದುಕೊಂಡವರು ಅಮೃತರಾಗುತ್ತಾರೆ.

[[1] ಸ್ವರೂಪ ಅಥವಾ ವಿಗ್ರಹ. ವ್ಯಾಪಕನಾದುದರಿಂದ ದರ್ಶನಕ್ಕೆ ವಿಷಯನಾಗುವುದಿಲ್ಲ; ಕಣ್ಣಿಗೆ ಕಾಣುವ ನೀಲವರ್ಣವೇ ಮೊದಲಾದುವುಗಳು ಇಲ್ಲದವನು.

[2] 'ಹೃದಾ' ಎಂದರೆ ಭಕ್ತಿ, 'ಮನೀಷಾ' ಎಂದರೆ ಧೃತಿ. 'ಧೃತಿಯಿಂದ ಸಮಾಹಿತನಾದ ಮನಸ್ಸುಳ್ಳವನು ಭಕ್ತಿಯಿಂದ ಪುರುಷೋತ್ತಮನನ್ನು ನೋಡುತ್ತಾನೆ. "ಭಕ್ತ್ಯಾತ್ವನನ್ಯಯಾ ಶಕ್ಯಃ" ಎಂದು ಗೀತೆಯು ಹೇಳಿರುವಂತೆ "ನೋಡುತ್ತಾನೆ" ಎಂದರೆ "ಸಾಕ್ಷಾತ್ಕರಿಸುತ್ತಾನೆ".']

೧೦. ಯಾವಾಗ ಪಂಚೇಂದ್ರಿಯಗಳು ಮನಸ್ಸಿನೊಂದಿಗೆ ಶಾಂತವಾಗುವುವೊ, ಬುದ್ಧಿಯು ಅಲ್ಲಾಡುವುದಿಲ್ಲವೊ ಅದನ್ನು ಪರಮಗತಿಯೆಂದು[1] ಹೇಳುತ್ತಾರೆ.

[[1] ಶರೀರದಲ್ಲಿರುವ ಗತಿಗಳನ್ನು ಬಿಟ್ಟು ಮೋಕ್ಷಕ್ಕಾಗಿ ಹೋಗುವುದು.]

೧೧. ಸ್ಥಿರವಾದ ಇಂದ್ರಿಯಧಾರಣೆ ಎಂಬ ಆ ಅವಸ್ಥೆಯನ್ನೇ[1] ಯೋಗವೆಂದು ತಿಳಿಯುತ್ತಾರೆ. ಆಗ ಅಪ್ರಮತ್ತನಾಗಿರಬೇಕು;[2] ಏಕೆಂದರೆ ಯೋಗಕ್ಕೆ ಉತ್ಪತ್ತಿನಾಶಗಳುಂಟು.[3]

[[1] ಹಿಂದಿನ ಮಂತ್ರದಲ್ಲಿ ನಿರ್ದಿಷ್ಟವಾದ ಒಳಗಿನ ಮತ್ತು ಹೊರಗಿನ ಇಂದ್ರಿಯಗಳ ಧಾರಣೆಯನ್ನೇ ಪರಮಗತಿ ಎಂದು ಹೇಳುತ್ತಾರೆ. ಸುದರ್ಶನಸೂರಿಗಳೂ ಕೂಡ ಪರಮಗತಿಯೇ ಯೋಗವೆಂದು ಹೇಳಿರುತ್ತಾರೆ.

[2] ಇಂದ್ರಿಯಗಳ ವ್ಯಾಪಾರವು ನಿಂತುಹೋದರೆ ಮನಸ್ಸು ಎಚ್ಚರವಾಗುತ್ತದೆ.
[3] ಯೋಗಕ್ಕೆ ಪ್ರತಿಕ್ಷಣವೂ ಅಪಾಯವಿರುವುದರಿಂದ ಮನಸ್ಸಿನ ಎಚ್ಚರಿಕೆಯಿರಬೇಕು ಅಥವಾ ಇಷ್ಟಪ್ರಾಪ್ತಿ-ಅನಿಷ್ಟನಿವೃತ್ತಿರೂಪವಾದ ಸರ್ವಪುರುಷಾರ್ಥಗಳಿಗೆ ಯೋಗವು ಸಾಧನವಾಗಿರುವುದರಿಂದ ಅಪ್ರಮತ್ತನಾಗಿರಬೇಕು.]

**೧೨.** (ಬ್ರಹ್ಮವು) ಮಾತಿನಿಂದಾಗಲಿ ಮನಸ್ಸಿನಿಂದಾಗಲಿ ಹೊಂದಲು ಶಕ್ಯವಲ್ಲ. 'ಇದ್ದಾನೆ' ಎಂದು ಹೇಳುವವನನ್ನು ಬಿಟ್ಟು ಇನ್ನೆಲ್ಲಿ ಅದು ಹೇಗೆ ಲಭ್ಯವಾಗುವುದು?[1]

[[1] ಉಪನಿಷತ್ತಿನಿಂದಲೇ ತಿಳಿಯಬರುವುದು ಎಂದರ್ಥ.]

**೧೩.** 'ಇದ್ದಾನೆ' ಎಂಬ ವಾಕ್ಯದಿಂದಲೂ,[1] ಮನಸ್ಸಿನಿಂದಲೂ (ಪರಮಾತ್ಮನು) ತಿಳಿಯಲ್ಪಡತಕ್ಕವನು. ಇವೆರಡರಿಂದಲೂ 'ಇದ್ದಾನೆ' ಎಂದು ತಿಳಿದುಕೊಂಡವನ ಮನಸ್ಸು ಪ್ರಸನ್ನವಾಗುವುದು.

[[1] ವೇದಾಂತವಾಕ್ಯಗಳಿಂದ ಅವನು 'ಇದ್ದಾನೆ' ಎಂದು ತಿಳಿದುಕೊಂಡ ಮೇಲೆ ಮನಸ್ಸಿನ ಮೂಲಕ 'ಇದ್ದಾನೆ' ಎಂದು ಮನನನಿದಿಧ್ಯಾಸನಗಳನ್ನು ಮಾಡಬೇಕು.]

**೧೪.** ಇವನ ಹೃದಯದಲ್ಲಿರುವ ಕಾಮಗಳೆಲ್ಲ[1] ಯಾವಾಗ ನಾಶವಾಗುವುವೊ ಆಗ ಮರ್ತ್ಯನು ಅಮೃತನಾಗುತ್ತಾನೆ[2] ಮತ್ತು ಇಲ್ಲಿಯೇ[3] ಬ್ರಹ್ಮಾನುಭವವನ್ನು ಹೊಂದುತ್ತಾನೆ.

[[1] ಕೆಟ್ಟ ವಸ್ತುಗಳಿಗೆ ಸಂಬಂಧಪಟ್ಟ ಬಯಕೆಗಳು.
[2] ಹಿಂದಿನ ಮತ್ತು ಮುಂದಿನ ಪಾಪಗಳೆಲ್ಲ ನಾಶವಾಗುವುವು.
[3] ಉಪಾಸನಾಸಮಯದಲ್ಲಿ.]

**೧೫.** ಯಾವಾಗ ಹೃದಯಗ್ರಂಥಿಗಳೆಲ್ಲ[1] ಇಲ್ಲಿಯೇ ನಾಶವಾಗುವುವೊ ಆಗ ಮರ್ತ್ಯನು ಅಮೃತನಾಗುವನು; ಇಷ್ಟೇ ಉಪದೇಶವು.[2]

[[1] ಗಂಟಿನಂತೆ ಬಿಡಿಸಲು ಕಷ್ಟವಾದ ರಾಗದ್ವೇಷಾದಿಗಳು.
[2] ಉಪಾಸಕನ ಕರ್ತವ್ಯವಾಗಿ ಉಪದೇಶಿಸಲ್ಪಡುವುದು ಇಷ್ಟೇ; ನೆತ್ತಿಯಲ್ಲಿರುವ ನಾಡಿಯ ಮೂಲಕ ಶರೀರದಿಂದ ಹೊರಗೆ ಬಂದು ಅರ್ಚಿರಾದಿಮಾರ್ಗಗಳ ಮೂಲಕ ಹೋಗುವುದು ಉಪಾಸಕನ ಕೆಲಸವಲ್ಲವೆಂದೂ ಉಪಾಸನೆಯಿಂದ ಪ್ರೀತನಾದ ಭಗವಂತನ ಕೆಲಸವೆಂದೂ ಮುಂದೆ ಹೇಳಲ್ಪಡುತ್ತದೆ: ಇದೇ ಅರ್ಥ.]

೧೬. ಹೃದಯುದ ನಾಡಿಗಳು ನೂರೊಂದು. ಅವುಗಳಲ್ಲಿ ಒಂದು[1] ನೆತ್ತಿಯ ವರೆಗೆ ಹೋಗಿದೆ. ಅದರ ಮೂಲಕ ಮೇಲಕ್ಕೆ[2] ಹೋಗುವವನು ಅಮೃತತ್ವವನ್ನು[3] ಪಡೆಯುತ್ತಾನೆ. ಇತರ ನಾಡಿಗಳು ನಾನಾ ವಿಧವಾದ ಸಂಸಾರಮಾರ್ಗದಲ್ಲಿ ಹೋಗಲು ಉಪಯೋಗವಾಗಿರುತ್ತವೆ.

[[1] ಸುಷುಮ್ನೆಯೆಂಬ ಬ್ರಹ್ಮನಾಡಿ.
[2] ಬ್ರಹ್ಮಲೋಕಕ್ಕೆ.
[3] ದೇಶವಿಶಿಷ್ಟವಾದ ಬ್ರಹ್ಮಪ್ರಾಪ್ತಿಯ ನಂತರ ಸ್ವರೂಪಾವಿರ್ಭಾವರೂಪವಾದ ಮುಕ್ತಿ.]

೧೭. ಅಂಗುಷ್ಠಪರಿಮಾಣವುಳ್ಳವನೂ ಅಂತರಾತ್ಮನೂ ಆದ ಪುರುಷನು ಜನರ ಹೃದಯದಲ್ಲಿ ಯಾವಾಗಲೂ ಇರುವನು. ಮುಂಜವೆಂಬ ಹುಲ್ಲಿನಿಂದ ದಂಟನ್ನು ತೆಗೆಯುವಂತೆ ಅವನನ್ನು ಅವನ ಶರೀರದಿಂದ[1] ಧೈರ್ಯವಾಗಿ[2] ಬೇರ್ಪಡಿಸಬೇಕು.[3] ಅವನನ್ನು ಶುಕ್ರನಾದ ಅಮೃತನೆಂದು ತಿಳಿದುಕೊಳ್ಳಬೇಕು, ಅವನನ್ನು ಶುಕ್ರನಾದ ಅಮೃತನೆಂದು ತಿಳಿದುಕೊಳ್ಳಬೇಕು.

[[1] ಪರಮಾತ್ಮನ ಶರೀರವಾದ ಜೀವರಿಂದ.
[2] ಜ್ಞಾನಕೌಶಲದಿಂದ.
[3] ವಿವೇಚಿಸಿ ತಿಳಿದುಕೊಳ್ಳಬೇಕು.]

೧೮. ಅನಂತರ ನಚಿಕೇತನು ಮೃತ್ಯುವಿನಿಂದ ಹೇಳಲ್ಪಟ್ಟ ಬ್ರಹ್ಮವಿದ್ಯೆಯನ್ನೂ ಮತ್ತು ಸಂಪೂರ್ಣವಾದ ಯೋಗವಿಧಿಯನ್ನೂ ಹೊಂದಿ ರಜಸ್ಸಿಲ್ಲದವನಾಗಿ, ಮೃತ್ಯುವಿಲ್ಲದವನಾಗಿ, ಬ್ರಹ್ಮವನ್ನು ಪಡೆದುಕೊಂಡನು. ಇನ್ನೊಬ್ಬ ಯಾವನು ಅಧ್ಯಾತ್ಮವನ್ನೇ ಹೀಗೆ ತಿಳಿದುಕೊಳ್ಳುತ್ತಾನೆಯೋ (ಅವನೂ ಮುಕ್ತನಾಗುವನು).

# ಉಪನಿಷನ್ಮಾಲೆ

ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ

ಈಶಾವಾಸ್ಯೋಪನಿಷತ್ . . ೦·೫೦

ಕೇನೋಪನಿಷತ್ . . ೦·೫೦

# ಶ್ರೀಮದ್ಭಗವದ್ಗೀತಾ

ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ

ಪುಟಗಳು ೩೪೨ ಬೆಲೆ ೩·೫೦

ಬೆಲೆ ರೂ. ೧·೫೦